ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ವಿಶ್ವನಾಥ ಕತ್ತಿ

ಡಾ. ರಾಮಕೃಷ್ಣ ಮರಾಠೆ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**VISHWANATH KATTI**
Eminent Parlimentarian Series
Written by **RAMAKRISHNA MARATHE**
Selection Grade Lecturer in Kannada
B.K. College, Belgaum.
**Published** by
Karnataka Legislature Library Committee
Vidhana Soudha, Bangalore-560001.
Page: 122 + x Price: 15-00 Rs.

First Edition: 2010 Copies: 2000
**Printed & Designed by**
Government Press, Bangalore.

**ವಿಶ್ವನಾಥ ಕತ್ತಿ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ಡಾ: ರಾಮಕೃಷ ಮರಾಠೆ**
ಆಯ್ಕೆ ಶ್ರೇಣಿ ಕನ್ನಡ ಪ್ರಾಧ್ಯಪಕರು, ಬಿ.ಕೆ. ಕಾಲೇಜು, ಬೆಳಗಾವಿ
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 122 + x ಬೆಲೆ: 15/- ರೂ.

ಮೊದಲ ಮುದ್ರಣ: 2010 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2009 – 2010

---

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೆ.ಜಿ. ಬೋಪಯ್ಯ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಶ್ರೀ ಜಿ. ಸೋಮಶೇಖರ ರೆಡ್ಡಿ**

ವಿಧಾನಸಭಾ ಸದಸ್ಯರು

**ಶ್ರೀ ಸುರೇಶ್‌ಗೌಡ**

ವಿಧಾನಸಭಾ ಸದಸ್ಯರು

**ಶ್ರೀ ಸಾ.ರಾ. ಮಹೇಶ್**

ವಿಧಾನಸಭಾ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ|| ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

**ಪ್ರೊ|| ಪಿ.ವಿ. ಕೃಷ್ಣಭಟ್ಟ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಹೆಚ್.ಎಂ. ಭಾರತೇಶ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ |
| ಎಂ. ಮಂಜುನಾಥ | ಜಂಟಿ ಕಾರ್ಯದರ್ಶಿ |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಅನಸೂಯ ಎನ್.ದೇವಗಿರಿ | ಮುಖ್ಯ ಗ್ರಂಥಪಾಲಕಿ (ಪ್ರ) |
| ಎಂ. ಮೋಹನ್ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

### ಸಂಪಾದಕರು

ಡಾ. ಮಲ್ಲಿಕಾರ್ಜುನ ಎಂ.ಸಿ

# ಮುನ್ನುಡಿ

**12ನೇ ಏಪ್ರಿಲ್ 2010**

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ಧಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ,

ಡಾ. ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಡಾ. ರಾಮಕೃಷ್ಣ ಮರಾಠೆ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ವಿಶ್ವನಾಥ ಕತ್ತಿ ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೆ.ಜಿ. ಬೋಪಯ್ಯ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ಕನ್ನಡ ನಾಡಿನ ಸಹಕಾರ ರಂಗದಲ್ಲಿ ಧ್ರುವನಕ್ಷತ್ರದಂತೆ ಬೆಳಗುತ್ತಿರುವ ಜಿಲ್ಲೆಯೆಂದರೆ ಬೆಳಗಾವಿ ಜಿಲ್ಲೆ. ದಕ್ಷಿಣ ಮಹಾರಾಷ್ಟ್ರದ ಕೊಲ್ಲಾಪೂರ ಸೀಮೆಯಲ್ಲಿ ಕರ್ನಾಟಕದ ಹೆಬ್ಬಾಗಿಲಿನಂತೆ ಕಂಗೊಳಿಸುತ್ತಿರುವ ಜಿಲ್ಲೆ ಇದು. ಇಲ್ಲಿಯ ಕನ್ನಡ–ಮರಾಠಿ ಸಂಸ್ಕೃತಿಗಳ ಸಾಮರಸ್ಯದ ಬೆಳೆ ಕಣ್ಮನ ಸೆಳೆಯುತ್ತದೆ. ರಾಷ್ಟ್ರೀಯ ಹೆದ್ದಾರಿ ನಂ. 4 (ಪುಣೆ–ಬೆಂಗಳೂರು ಹೆದ್ದಾರಿ) ಕರ್ನಾಟಕವನ್ನು ಬೀಳ್ಕೊಟ್ಟು ಪುಣೆಯತ್ತ ಚಲಿಸುವುದು ಈ ಜಿಲ್ಲೆಯ ಮೂಲಕವೇ. ಬೆಳಗಾವಿ–ಕೊಲ್ಲಾಪುರ ಮಾರ್ಗ ಮಧ್ಯದಲ್ಲಿಯೇ ಸಂಕೇಶ್ವರ ಪಟ್ಟಣವಿದೆ. ಇಲ್ಲಿಯ 'ದಿ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ'ಯು ತನ್ನ ಕಾರ್ಯದಕ್ಷತೆಯಿಂದ, ನಾಡಿನಲ್ಲಿಯೇ ಹೆಸರಾದುದು. ಈ ಸಕ್ಕರೆ ಕಾರಖಾನೆಯನ್ನು ಮಜಬೂತವಾಗಿ ಕಟ್ಟಿದ ಸಹಕಾರ ಧುರೀಣರ ದೊಡ್ಡ ಪರಂಪರೆಯೇ ಇದೆ. ಅವರಲ್ಲಿ ಅಪ್ಪಣ್ಣಗೌಡ ಪಾಟೀಲರ ಹೆಸರು ಅಗ್ರಗಣ್ಯವಾದುದು. ಅವರ ನಂತರ ಆ ಕಾರಖಾನೆಯನ್ನು ಬೆಳೆಸಿದ ಶ್ರೇಯಸ್ಸು ವಿಶ್ವನಾಥ ಕತ್ತಿ ಅವರದು. ವಿಶ್ವನಾಥ ಕತ್ತಿಯವರು ಅಪ್ಪಣ್ಣಗೌಡರ ಸಹಕಾರ ಗರಡಿಯಲ್ಲಿ ತಮ್ಮ ವ್ಯಕ್ತಿತ್ವ ಉಜ್ವಲಗೊಳಿಸಿಕೊಂಡವರು. ಅವರನ್ನು ನಾನು ಪ್ರತ್ಯಕ್ಷ ನೋಡಿಲ್ಲವಾದರೂ ಅವರ ಬಗೆಗೆ ಸಾಕಷ್ಟು ಕೇಳಿದ್ದೆ. ಅವರು ಬೆಳೆಸಿದ ಸಂಸ್ಥೆಗಳನ್ನು ಕಣ್ಣಾರೆ ನೋಡಿದ್ದೆ. ಅವರ ಸುಪುತ್ರರು ಈ ಭಾಗದಲ್ಲಿ ಅವರ ಚಟುವಟಿಕೆಗಳನ್ನು ಯಶಸ್ವಿಯಾಗಿ ಮುನ್ನಡೆಸಿದ್ದಾರೆ. ಅವರ ಕ್ರಿಯಾಶೀಲ ಚಟುವಟಿಕೆಗಳಲ್ಲಿ ದಿ. ವಿಶ್ವನಾಥ ಕತ್ತಿಯವರ ಅಗೋಚರ ಶಕ್ತಿ ಇರುವುದನ್ನು ಯಾರಾದರೂ ಗಮನಿಸಬಹುದಾಗಿದೆ.

ಸನ್ಮಾನ್ಯ ಉಮೇಶ ಕತ್ತಿಯವರು ಬಿ.ಎಸ್. ಯಡಿಯೂರಪ್ಪನವರ ಸರಕಾರದಲ್ಲಿ ತೋಟಗಾರಿಕೆ ಮತ್ತು ಬಂದಿಖಾನೆ ಸಚಿವರಾಗಿ ಕಾರ್ಯನಿರ್ವಹಿಸುತ್ತಿರುವರು. ಸನ್ಮಾನ್ಯ ರಮೇಶ ಕತ್ತಿಯವರು ಚಿಕ್ಕೋಡಿ ಲೋಕಸಭಾ ಕ್ಷೇತ್ರದ ಜನಪ್ರಿಯ ಸಂಸದರಾಗಿ ಜನಪರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವರು. ಇವರ ಚಟುವಟಿಕೆಗಳ ಮೂಲಕ ವಿಶ್ವನಾಥ ಕತ್ತಿಯವರು ಜೀವಂತವಾಗಿದ್ದಾರೆಂದೇ ನನ್ನ ಭಾವನೆ. ಇಂತಹ ಹಿರಿಯರನ್ನು

ಕುರಿತು 'ಚರಿತ್ರೆ' ಗ್ರಂಥ ಬರೆದು ಕೊಡಲು ವಿಧಾನಮಂಡಲದ ಗ್ರಂಥಾಲಯ ಸಮಿತಿಯು ಕೇಳಿಕೊಂಡಾಗ ತುಂಬಾ ಸಂತೋಷದಿಂದ, ಅಭಿಮಾನದಿಂದ ಈ ಕಾರ್ಯವನ್ನು ಒಪ್ಪಿಕೊಂಡೆ. ವಿಧಾನ ಮಂಡಲದ ಗ್ರಂಥಾಲಯ ಸಮಿತಿಯ ಎಲ್ಲ ಅಧಿಕಾರಿಗಳ ಮತ್ತು ಸಿಬ್ಬಂದಿಗಳ ಪ್ರೀತಿ ವಿಶ್ವಾಸಕ್ಕೆ ನಾನು ಋಣಿಯಾಗಿರುವೆ.

ಒಪ್ಪಿಕೊಂಡ ಕೆಲಸ ಪೂರ್ಣಗೊಳಿಸಲು ಹಲವಾರು ಹಿರಿಯರು ನೆರವಾಗಿದ್ದಾರೆ. ಅವರನ್ನು ನೆನೆಯುವುದು ನನ್ನ ಆದ್ಯ ಕರ್ತವ್ಯ. ಸನ್ಮಾನ್ಯ ಸಚಿವರಾದ ಶ್ರೀ ಉಮೇಶ ಕತ್ತಿಯವರಿಗೆ, ಸನ್ಮಾನ್ಯ ಸಂಸದರಾದ ಶ್ರೀ ರಮೇಶ ಕತ್ತಿಯವರಿಗೆ ಮತ್ತು ಸಹೋದರಿ ಶ್ರೀಮತಿ ಪೂರ್ಣಿಮಾ ಎ. ಪಾಂಗಿ ಅವರಿಗೆ ಮೊದಲು ತುಂಬ ಹೃದಯದ ಕೃತಜ್ಞತೆಗಳನ್ನು ಸಲ್ಲಿಸಬೇಕು.

ಬೆಲ್ಲದ ಬಾಗೇವಾಡಿಯ ಶ್ರೀ ಬಸವರಾಜ ಎಸ್. ಕತ್ತಿ(ಸೆಕ್ರಟರಿ), ಆರ್.ಟಿ. ಶಿರಾಳಕರ ಮತ್ತು ಜಯಸಿಂಗ ರಜಪೂತ ಇವರ ಸಹಕಾರವನ್ನು ಕೃತಜ್ಞತೆಯಿಂದ ನೆನೆಯುವೆ. ವಿಷಯ ಸಂಗ್ರಹಿಸುವಾಗ ಶ್ರೀ ಗುರುವ, ರವೀಂದ್ರ ಶೆಟ್ಟಿ, ಬಾಳಾಸಾಹೇಬ ಸಾರವಾಡೆ, ಈರಣ್ಣ ತುಬಚಿ, ವಿಜಯನಗರದ ಅಪ್ಪಾಸಾಹೇಬ ಶಿರಗೂರ, ಅಶೋಕ ಶಿರಗೂರ, ವಿಶ್ವನಾಥ ಗುರುಶಾಂತಪ್ಪ ಬೋರಣ್ಣವರ, ಬೆಳಗಾವಿಯ ವ್ಹಿ.ಎಂ. ಪಟ್ಟೇದ, ಬಿ.ಎಸ್. ಗವಿಮಠ ಮೊದಲಾದ ಅನೇಕ ಮಹನೀಯರು ನೆರವಾಗಿದ್ದಾರೆ. ಅವರಿಗೆಲ್ಲ ಕೃತಜ್ಞತೆಗಳು.

ಬೆನ್ನುಡಿ ಬರೆದ ಹಿತೈಷಿ ಡಾ. ಸರಜೂ ಕಾಟ್ಕರ್ ಹಾಗೂ ಅಚ್ಚುಕಟ್ಟಾಗಿ ಅಕ್ಷರ ಸಂಯೋಜನೆ ಮಾಡಿದ ಗೆಳೆಯ ಪ್ರಕಾಶ ಗಿರಿಮಲ್ಲನವರ ಅವರಿಗೂ ಕೃತಜ್ಞತೆಗಳು. ವಿಶೇಷ ಕಾಳಜಿ ವಹಿಸಿದ ಸಂಪಾದಕರಾದ ಡಾ. ಮಲ್ಲಿಕಾರ್ಜುನ ಕೂಡ್ಲಿಗೆರೆ ಅವರಿಗೆ ವಂದನೆಗಳು.

ಸುಂದರವಾಗಿ ಮುದ್ರಣ ಮಾಡಿದ, ಪ್ರಕಟಣೆಗೆ ಅಣಿಗೊಳಿಸಿದ ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ನಾನು ಆಭಾರಿ.

ನನ್ನ ಬರವಣಿಗೆ ಸಹಾಯ ಮಾಡಿದ ಪತ್ನಿ ಮೀರಾ ಮಕ್ಕಳು ಶ್ರೀವಿದ್ಯಾ, ಶರ್ವಾಣಿ, ಸಂಜೀವಿನಿ ಅವರಿಗೆ ಕೃತಜ್ಞತೆಗಳು.

ಡಾ. ರಾಮಕೃಷ್ಣ ಮರಾಠೆ

# ಪರಿವಿಡಿ



F-೨

"ತಾನೊಬ್ಬ ವಿಶ್ವಮಾನವ, ಯಾವ  ಮತಕ್ಕೂ ಸೇರಿದವನಲ್ಲ ಎಂಬ
ಎಂಬ ಭಾವನೆ ಪ್ರತಿಯೊಬ್ಬರಲ್ಲಿಯೂ ಮೂಡಿದಾಗ ಅನೇಕ ರಾಜಕೀಯ
ಸಾಮಾಜಿಕ ಆರ್ಥಿಕ ಜಾಡ್ಯಗಳು ಕೊನೆಗೊಳ್ಳುವುದಲ್ಲದೇ
ಮಾನಸಿಕ ಶಾಂತಿ ದೊರೆಯುತ್ತದೆ."

– ಶ್ರೀ ಕುವೆಂಪು

# 1

# ವಿಶ್ವನಾಥ ಕತ್ತಿಯವರ ವ್ಯಕ್ತಿತ್ವ

## ಸೇವೆ–ಸ್ನೇಹ–ಸಹಕಾರ

ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲೂಕಿನ ಒಂದು ಸಣ್ಣ ಹಳ್ಳಿಯಿಂದ ವಿಶ್ವನಾಥ ಕತ್ತಿಯವರ ಜೀವನಕಥನ ಆರಂಭವಾಗುತ್ತದೆ. ಆ ಹಳ್ಳಿಯಲ್ಲಿಯೇ ಅವರದು ಶ್ರೀಮಂತ ಮನೆತನ. ಅದು ಬಡವರ, ದೀನ–ದುರ್ಬಲರ ಪರವಾಗಿರುವಂತಹದ್ದು; ಜನಪರ–ಪರೋಪಕಾರ ಚಟುವಟಿಕೆಗಳಿಗೆ ಹೆಸರಾಗಿರುವಂತಹದ್ದು; ಸಹಕಾರ–ಸಹಬಾಳ್ವೆಗೆ ತುಡಿಯುವಂತಹದ್ದು; ರಾಜಕೀಯ ಹಿನ್ನೆಲೆ ಇರುವಂತಹದ್ದು; ಸಾಮಾಜಿಕ ಘನತೆ–ಗೌರವ ಹೊಂದಿರುವಂತಹದ್ದು–ಇಂಥ ಸಮೃದ್ಧ ಪರಂಪರೆಯ ಮುಂದುವರಿದ ಧಾರೆಯಾಗಿ ವಿಶ್ವನಾಥ ಕತ್ತಿಯವರ ಜೀವನ ಮುನ್ನಡೆಯಿತು. ಆ ಭಾಗದಲ್ಲೆಲ್ಲ ಅವರಿಗೆ 'ಸಾಹುಕಾರ' ಎಂಬುದೇ ಗೌರವ ವಿಶೇಷಣ. ಅದು ಅವರ ವ್ಯಕ್ತಿತ್ವಕ್ಕೆ ಭೂಷಣ ಕೂಡ.

1950ರ ದಶಕ, ಆಗಿನ್ನೂ ವಿಶ್ವನಾಥ ಕತ್ತಿಯವರು ಬೆಳಗಾವಿಯಲ್ಲಿ ವಿದ್ಯಾರ್ಥಿ. ಓದುವ ವಯಸ್ಸಿನಲ್ಲಿಯೇ ಆಕಸ್ಮಿಕವಾಗಿ ಬಂದೆರಗಿದ ಕೆಲವು ತಿರುವುಗಳಿಂದಾಗಿ ಮನೆ ನಡೆಸುವ ಹೊಣೆ ಹೊರಬೇಕಾಯಿತು. ಸಾಮಾಜಿಕರಂಗದಲ್ಲಿ ಮನೆತನದ ಹಿರಿಯರು ನಿರ್ವಹಿಸುತ್ತಿದ್ದ ಚಟುವಟಿಕೆಗಳಿಗೆ ಇವರು ವಾರಸುದಾರರಾಗಬೇಕಾಯಿತು. ಅಜ್ಜನ ಔದಾರ್ಯ, ತಂದೆಯ ದೇಶಭಕ್ತಿ, ಅಣ್ಣನ ಸಹಕಾರ ಸೇವೆಗೆ ಇವರೂ ಮುಂದಾಗಬೇಕಾಯಿತು.

'ಕೂಸಂ ಪ್ರಾಯಾದೊಡೆ ಅಭಿಪ್ರಾಯಂ ಕೂಸಕ್ಕಮೆ' ಎಂಬುದೊಂದು ಹಳೆಗನ್ನಡದ ಶ್ರೇಷ್ಠ ಉಕ್ತಿ. ವಯಸ್ಸು ಸಣ್ಣದಾದರೇನು ವಿಚಾರ ಸಣ್ಣದೇ ಎಂಬುದು ಅದರ ಅರ್ಥ. ವಿಶ್ವನಾಥ ಕತ್ತಿಯವರು ವಯಸ್ಸಿನಲ್ಲಿ ಕಿರಿಯರಾದರೂ ಅವರೊಳಗಿನ ಧೀಶಕ್ತಿ, ಸೇವಾಶಕ್ತಿ ಹಿರಿಯದಾಗಿತ್ತು. ಈ ಶಕ್ತಿಸಾಮರ್ಥ್ಯದಿಂದ ಅವರು ಮೊದಲು ಮನೆಗೆದ್ದರು, ಮಾರುಗೆದ್ದರು, ಆ ಮೇಲೆ ಊರು ಗೆದ್ದರು, ಊರಾಚೆಯ ಕ್ಷೇತ್ರ ಗೆದ್ದರು, ಜನಮನದ ಹೃದಯ ಗೆದ್ದರು. ಅಂತೆಯೆ ಜನರ ಹೃದಯ ಗದ್ದುಗೆಯಲ್ಲಿ ಉಳಿದರು.

ಬೆಲ್ಲದ ಬಾಗೇವಾಡಿಯ 'ಅರ್ಬನ್ ಕೋ–ಆಪ್ ಬ್ಯಾಂಕಿನಿಂದ ಅವರ ಸೇವೆಯ ದಾಂಗುಡಿ ಕುಡಿ ಬಿಟ್ಟಿತು. ಅಲ್ಲಿಂದ 'ಗ್ರಾಮ ಸುಧಾರಣಾ ಸಮಿತಿ', 'ವ್ಯವಸಾಯ ಸಹಕಾರಿ ಸಂಘ'ಗಳ ಮೂಲಕ ಅವರ ಸೇವೆ ಸೀಮೋಲಂಘನ ಮಾಡಿತು. ಸಂಕೇಶ್ವರದ 'ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ', ಘಟಪ್ರಭಾದ

'ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ', 'ಬೆಳಗಾವಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕ್', ಬೆಳಗಾವಿಯ 'ಕೆ.ಎಲ್.ಇ. ಶಿಕ್ಷಣ ಸಂಸ್ಥೆ', ಪಂತಬಾಳೇಕುಂದ್ರಿಯ 'ಸಹಕಾರಿ ಸ್ಪಿನ್ನಿಂಗ್ ಮಿಲ್', ಬೆಂಗಳೂರಿನ 'ಕರ್ನಾಟಕ ಸಹಕಾರಿ ಸಕ್ಕರೆ ಕಾರಖಾನೆಯ ಮಹಾಮಂಡಳ'– ಹೀಗೆ ಜಿಲ್ಲೆ, ರಾಜ್ಯದಾದ್ಯಂತ ಅವರ ಸೇವೆಯ ಬಳ್ಳಿ ಪಸರಿಸಿತು. ಅದರೊಂದಿಗೆ ವಿಧಾನ ಪರಿಷತ್ ಸದಸ್ಯರಾಗಿ ಪೂರ್ಣಾವಧಿ ಸೇವೆ ಸಲ್ಲಿಸಿದರು. ವಿಧಾನ ಸಭೆಯ ಸದಸ್ಯರಾಗಿಯೂ ಆಯ್ಕೆಯಾದರು.

ವಿಶ್ವನಾಥ ಕತ್ತಿಯವರು ಹಂತಹಂತವಾಗಿ ನಿರಂತರ ಬೆಳೆದವರು. ಬೆಳಗಾವಿ ಜಿಲ್ಲೆಯ ಸಹಕಾರ ರಂಗದ ಧುರೀಣರಾದರು. ಜನಸೇವೆಯಿಂದ ಜನನಾಯಕ ರೆನಿಸಿದರು.

ಸಾರ್ವಜನಿಕ ಸಂಘ–ಸಂಸ್ಥೆಗಳ ಆಡಳಿತವು ಜನಪರವಾಗಿರಬೇಕಲ್ಲದೆ, ಪಾರದರ್ಶಕ ವಾಗಿರಬೇಕೆಂಬುದು ವಿಶ್ವನಾಥ ಕತ್ತಿಯವರ ನಿಲುವು ಆಗಿತ್ತು. ಒಂದು ಸಂಸ್ಥೆಯ ಆಡಳಿತವು ಸುಸೂತ್ರವಾಗಿ ನಡೆಯುತ್ತಿರುವಾಗ ಅದಕ್ಕೆ ವ್ಯತ್ಯಯವನ್ನುಂಟು ಮಾಡುವುದು ಮಹಾಪಾಪವೆನ್ನುತ್ತಿದ್ದರು. ಆಡಳಿತ ಯಂತ್ರವು ಜನಹಿತಕ್ಕೆ ವಿರುದ್ಧವಾಗಿ ಕಾರ್ಯನಿರ್ವಹಿಸತೊಡಗಿದರೆ, ಆ ಯಂತ್ರದ ಧ್ವನಿ ಕಿವಿಗೆ ಕರ್ಕಶವಾಗಿ ಕೇಳಿ ಬಂದರೆ ಅದನ್ನು ಸಹಿಸುವುದೂ ಪಾಪವೆನ್ನುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ ಪ್ರಾಮಾಣಿಕ ಮತ್ತು ಜನಪರ ಸೇವೆ ಮಾಡಬೇಕೆನ್ನುವ ಇಚ್ಛೆಯುಳ್ಳವರು ಅದರ ಆಡಳಿತವನ್ನು ಸುಧಾರಿಸಬೇಕು ಮತ್ತು ಸೇವೆಯ ಅವಕಾಶ ಕೈ ಮಾಡಿ ಕರೆದಾಗ ಸೇವಾಕಾಂಕ್ಷಿಗಳು ಆ ಕ್ಷೇತ್ರವನ್ನು ಪ್ರವೇಶಿಸಬೇಕೆನ್ನುತ್ತಿದ್ದರು. ಜೀವನದುದ್ದಕ್ಕೂ ಅವರು ಹಾಗೆಯೇ ನಡೆದುಕೊಂಡರು.

ಸಹಕಾರ ರಂಗದಲ್ಲಿ ಇಪ್ಪತ್ತೈದು ವರ್ಷ ಕಾಲ ಅವರು ಸೇವೆ ಮಾಡಿದರು. ಸೇವೆಯ ಸಂದರ್ಭದಲ್ಲಿ ಯಾವುದೇ ಪಕ್ಷ ಪಂಗಡ, ಜಾತಿ ಮತ, ಊರು ಕೇರಿಗಳ ಭೇದ ಮಾಡಲಿಲ್ಲ. ಸೇವೆಯ ವಿಷಯದಲ್ಲಿ ಅವರು ಮಾನವತಾವಾದಿ ಯಾಗಿದ್ದರು. ಈ ಕಾರಣಕ್ಕಾಗಿಯೇ ಬೇರೆ ಪಕ್ಷದ ಆಡಳಿತವಿರುವ ಸಂಸ್ಥೆಗಳಲ್ಲಿ ಕೂಡ ಅವರು ಚೆನ್ನಾಗಿ ಕಾರ್ಯನಿರ್ವಹಿಸಲು ಸಾಧ್ಯವಾಯಿತು. ರಾಜ್ಯದಲ್ಲಿ ಬೇರೆ ಪಕ್ಷದ ಆಡಳಿತವಿರುವಾಗ ಇವರು ಸಂಸ್ಥಾ ಕಾಂಗ್ರೆಸ್ಸಿನ ಅಭ್ಯರ್ಥಿಯಾಗಿ ಆರಿಸಿ ಬರಲು ಸಾಧ್ಯವಾಯಿತು. ಇವರ ಸೇವಾಕಾಂಕ್ಷೆ, ಗುಣಗ್ರಾಹಿ ವ್ಯಕ್ತಿತ್ವಕ್ಕೆ ಅಧಿಕಾರದ ಅಲೆಯೂ ಒಲಿದು ಬಿಡುತ್ತಿತ್ತು. ವಿಶ್ವನಾಥ ಕತ್ತಿಯವರು ವಿಧಾನ ಸಭೆಗೆ ಆಯ್ಕೆಯಾದರು. ಸೇವೆಯ ಅವಕಾಶ ಕಣ್ಣೆದುರು ವಿಶಾಲವಾಗಿ ಹರಡಿತ್ತು. ಅದನ್ನು ಮಾಡಬೇಕೆನ್ನುವ ಛಲವೂ ಮನಸ್ಸಿನಲ್ಲಿತ್ತು. ಅದಕ್ಕೆ ಬೇಕಾಗುವ ಶಕ್ತಿ

ಸಾಮರ್ಥ್ಯ, ಜನಬಲವೂ ಅವರಿಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ ಅವರಿದ್ದ ಪಕ್ಷವೇ ರಾಜ್ಯದಲ್ಲಿ ಆಡಳಿತದ ಸೂತ್ರ ಹಿಡಿದಿತ್ತು. ಆತ್ಮೀಯರೆನಿಸಿದ ಗೆಳೆಯರು ಆಡಳಿತದ ಸೂತ್ರ ಹಿಡಿದಿದ್ದರು. ಇಂತಹ ಅನುಕೂಲದ ಪರಿಸ್ಥಿತಿಯಿರುವಾಗ ವಿಧಿ ಅವರನ್ನು ವಿಧಾನಸಭೆಯಲ್ಲಿ ಇರಗೊಡಲಿಲ್ಲ, ಅಲ್ಲಿಂದಲೇ ಕರೆದುಕೊಂಡು ಹೋಯಿತು. ಅದೊಂದು ದುರಂತದ ಕಥೆ.

ವಿಶ್ವನಾಥ ಕತ್ತಿಯವರು ಗತಿಸಿ ಇಪ್ಪತ್ತೈದು ವರುಷ ಆಗುತ್ತ ಬಂತು. ಅಂದಿನ ಅವರ ಕಾರ್ಯವೈಖರಿಯು ಅವರ ನೆನಪನ್ನು ಇನ್ನೂ ಹಸಿರಾಗಿ ಉಳಿಸಿದೆ. ಅವರ ಗೆಳೆಯರು, ಒಡನಾಡಿಗಳು, ಅನುಯಾಯಿಗಳು ಅವರ ಬಗೆಗೆ ಹೃದಯತುಂಬಿ ಮಾತನಾಡುತ್ತಾರೆ. ಅವರ ಸಾಧನೆಯ ಹೆಜ್ಜೆ ಗುರುತುಗಳನ್ನು ತೋರಿಸುತ್ತಾರೆ. ವಿಶ್ವನಾಥ ಕತ್ತಿಯವರ ನೆನಪು ಹಸಿರಾಗಿ ಉಳಿಯಲು ಇನ್ನೂ ಒಂದು ಮುಖ್ಯ ಕಾರಣವಿದೆ. ಅದೆಂದರೆ, ಅವರ ಮಕ್ಕಳ ಸೇವೆ. ಸನ್ಮಾನ್ಯ ಉಮೇಶ ಕತ್ತಿ ಅವರು, ಸನ್ಮಾನ್ಯ ರಮೇಶ ಕತ್ತಿಯವರು ತಂದೆಯ ಕನಸನ್ನು ನನಸು ಮಾಡಲು ಕ್ರಿಯಾಶೀಲರಾಗಿದ್ದಾರೆ. ಹಿರಿಯ ಮಗ ಸನ್ಮಾನ್ಯ ಉಮೇಶ ಕತ್ತಿಯವರು ತಂದೆಯ ಮರಣದ ತರುವಾಯ ಅವರ ರಾಜಕಾರಣದ ಉತ್ತರಾಧಿಕಾರಿಯಾಗಿ ಸೇವೆಯನ್ನು ಆರಂಭಿಸಿದರು. ಶಾಸಕರಾಗಿ, ಸಚಿವರಾಗಿ ಜನಪರ ಕಾರ್ಯಗಳಲ್ಲಿ ತೊಡಗಿಸಿ ಕೊಂಡರು. ಕಿರಿಯ ಮಗ ಸನ್ಮಾನ್ಯ ರಮೇಶ ಕತ್ತಿಯವರು ಸಂಕೇಶ್ವರ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ, ಬೆಳಗಾವಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕ್ ಇವುಗಳ ಆಡಳಿತ ಸೂತ್ರ ಹಿಡಿದು, ಅವುಗಳನ್ನು ಅಭಿವೃದ್ಧಿಯ ಪಥದಲ್ಲಿ ನಡೆಸಿದರು. ಇತ್ತೀಚೆಗೆ ಅಂದರೆ 2009ರಲ್ಲಿ ಜರುಗಿದ ಲೋಕಸಭಾ ಚುನಾವಣೆಯಲ್ಲಿ ಚಿಕ್ಕೋಡಿ ಮತಕ್ಷೇತ್ರದಿಂದ ಸ್ಪರ್ಧಿಸಿದ ಶ್ರೀ ರಮೇಶ ಕತ್ತಿಯವರು ಭಾರಿ ಬಹುಮತದಿಂದ ಆರಿಸಿ ಬಂದಿದ್ದಾರೆ. ಜನಪ್ರಿಯ ಸಂಸದರಾಗಿ ತಮ್ಮ ಸೇವಾರಂಗವನ್ನು ವಿಸ್ತರಿಸಿಕೊಂಡಿದ್ದಾರೆ. ತಂದೆಯವರು ಹಾಕಿಕೊಟ್ಟ ಹಾದಿಯಲ್ಲಿ ನಡೆದು ಈ ಇಬ್ಬರೂ ಮಕ್ಕಳು ಜನನಾಯಕರಾಗಿ ಸೇವಾತತ್ಪರರಾಗಿದ್ದಾರೆ.

ಸ್ವಂತ ಒಡೆತನದ ಒಂದು ಸಕ್ಕರೆ ಕಾರಖಾನೆ ಪ್ರಾರಂಭಿಸಿ ತಂದೆಯ ಸ್ಮರಣಾರ್ಥ 'ವಿಶ್ವನಾಥ ಶುಗರ್ಸ್' ಎಂದು ಹೆಸರಿಟ್ಟಿದ್ದಾರೆ. ಕೆ.ಎಲ್.ಇ. ಶಿಕ್ಷಣ ಸಂಸ್ಥೆಯ 'ದಂತ ವಿಜ್ಞಾನ ಮತ್ತು ಸಂಶೋಧನ ಮಹಾವಿದ್ಯಾಲಯ'ಕ್ಕೆ ಉದಾರ ದೇಣಿಗೆ ನೀಡಿ ಆ ಮಹಾವಿದ್ಯಾಲಯಕ್ಕೆ ತಂದೆಯ ಹೆಸರಿಡಲು ಕಾರಣರಾಗಿದ್ದಾರೆ. ಅಜ್ಜನ ಹೆಗಲ ಮೇಲೆ ಕುಳಿತು ಮೊಮ್ಮಗನಿಗೆ ದೂರದ ದಾರಿ ಕಾಣುವಂತೆ, ತಂದೆಯ ಆದರ್ಶ ಅನುಭವದ ದಾರಿಯಲ್ಲಿ ನಡೆದಿರುವ ಈ ಮಕ್ಕಳೆದುರಿಗೂ

ಸೇವೆಯ ವಿಶಾಲ ಬಯಲು ಹರಡಿಕೊಂಡಿದೆ. ಸಮಕಾಲೀನ ಸಂದರ್ಭ ಹಾಗೂ ಕಾಲದ ಅಗತ್ಯಕ್ಕೆ ಅನುಗುಣವಾಗಿ ಹೊಸ ಹೊಸ ಜನಪರ ಯೋಜನೆಗಳನ್ನು ರೂಪಿಸುವ, ಅವುಗಳನ್ನು ಅನುಷ್ಠಾನಗೊಳಿಸುವ ದಿಶೆಯಲ್ಲಿ ಅವರು ನಿರತರಾಗಿದ್ದಾರೆ.

ಕರ್ನಾಟಕ ಸರಕಾರ ಹಮ್ಮಿಕೊಂಡಿರುವ 'ಪ್ರತಿಭಾವಂತ ಸಂಸದೀಯ ಪಟು ಪುಸ್ತಕ' ಮಾಲಿಕೆಗಾಗಿ ವಿಶ್ವನಾಥ ಕತ್ತಿಯವರ ಚರಿತ್ರೆ ಬರೆದು ಕೊಡುವುದಕ್ಕಾಗಿ ಅನೇಕ ಜನರನ್ನು ಸಂದರ್ಶಿಸಿದ್ದೇನೆ. ಅವರು ಹೇಳುವ ಮಾತುಗಳನ್ನು ಲಕ್ಷ್ಯಗೊಟ್ಟು ಕೇಳಿದ್ದೇನೆ. ಎಲ್ಲರ ಮಾತಿನಲ್ಲಿ ಕೇಳಿ ಬಂದ ಸಾಮಾನ್ಯ ಅಂಶಗಳೆಂದರೆ: ಅವರು ಸದಾ ಹಸನ್ಮುಖಿ. ಅವರದು ಮಕ್ಕಳ ಮನಸು. ನಿರ್ವೈರಭಾವ. ಕ್ರೀಡಾ ಮನೋಭಾವ. ಕುಟುಂಬ ಪ್ರೇಮಿ, ಸ್ನೇಹ ಜೀವಿ, ನಗೆಗಾರ, ಉತ್ತಮ ವಾಗ್ಮಿ, ಓದಿನಲ್ಲಿ ಆಸಕ್ತಿ, ಪ್ರಸಂಗಾವಧಾನಿ ಎತ್ತಿಕೊಂಡ ಕೆಲಸ ಪಟ್ಟು ಹಿಡಿದು ಮಾಡುವ ಛಲಗಾರ. ಬಡವರ ಕಂಡರೆ ಕರಗುವ ಮನಸು, ಕಷ್ಟಜೀವಿಗಳಿಗೆ ಮಿಡಿಯುವ ಮನಸು, ಸಕಲ ಜೀವಿಗಳಿಗೆ ಲೇಸನ್ನು ಬಯಸುವ ಶರಣಗುಣ..... ಇತ್ಯಾದಿ.

ಚರಿತ್ರೆಗಾಗಿ ಬೇಕಾಗುವ ಸಂಗತಿಗಳನ್ನು ಸಂಗ್ರಹಿಸಲು ಹೊರಟಾಗ ಕೇಳಿ ಬಂದಿರುವ ಕೆಲವು ಮಾತುಗಳನ್ನು ಇಲ್ಲಿ ದಾಖಲಿಸಬೇಕೆನಿಸಿತು. ಅವುಗಳಿಂದ ವಿಶ್ವನಾಥ ಕತ್ತಿಯವರ ಸ್ನೇಹಜೀವನ, ಸಹಕಾರ ಜೀವನ, ಸೇವಾ ಜೀವನದ ದರ್ಶನವಾಗುವುದರಲ್ಲಿ ಸಂದೇಹವಿಲ್ಲ.

* * *

ಆತ್ಮೀಯರಾದ ಜಯಸಿಂಗರ ಸೂಚನೆಯ ಮೇರೆಗೆ ಒಂದು ದಿನ (ದಿನಾಂಕ 7.3.2007) ಸಂಕೇಶ್ವರದಲ್ಲಿದ್ದ ಹಿರಿಯರಾದ ಬಾಳಾಸಾಹೇಬ ಸಾರವಾಡೆ ಅವರನ್ನು ಕಂಡೆ. ಅವರದು ಮರಾಠಿಮಿಶ್ರಿತ ಕನ್ನಡ ಮಾತು. ಲೋಕಾನುಭವದಲ್ಲಿ ಗಟ್ಟಿ ಕುಳ. ಅಪ್ಪಣ್ಣಗೌಡರ ಒಡನಾಟದಲ್ಲಿಯೇ ರಾಜಕೀಯ ರಂಗ, ಸಾಮಾಜಿಕ ರಂಗದಲ್ಲಿ ಸೇವೆ ಮಾಡಿದವರು. ಅಪ್ಪಣ್ಣಗೌಡರ ನಂತರದ ರಾಜಕೀಯ ಬೆಳವಣಿಗೆಯಲ್ಲಿ ಇವರು ಬೇರೆ ಪಕ್ಷ ಸೇರಿ ಸೇವೆ ಮಾಡಿದರೂ ವಿಶ್ವನಾಥ ಕತ್ತಿ ಸಾಹುಕಾರರ ಬಗೆಗೆ, ಅವರ ಸಾಧನೆಯ ಬಗೆಗೆ ಅಪಾರ ಗೌರವದಿಂದ ಮಾತನಾಡಿದರು:

"ವಿಶ್ವನಾಥ ಕತ್ತಿ ಅವರು ಅತಿಶಯ ಸೌಮ್ಯ, ವಿನೋದಿ ಸ್ವಭಾವದ ಮನುಷ್ಯ. ಸ್ಪಷ್ಟ ವಕ್ತಾ. ಜನರ ನಾಡಿ ಹಿಡಿದು ದುಡೀತಿದ್ರು. ದುಡಿಮೆ ಜಾಸ್ತಿ. ಪರಂತು ಮಾಡಿದೆ ಎಂಬ ಭಾವ ಅವರ ಬಳಿ ಸುಳಿಯಲಿಲ್ಲ. ಜನಕಲ್ಯಾಣ ಕಾರ್ಯ ಅವರ ಅಂತರಂಗದ ಅಭಿಲಾಷೆಯಾಗಿತ್ತು"

"ವಿಶ್ವನಾಥ ನಷ್ಕೋಪ ಮನುಷ್ಯ. ಕುರ್ಚಿ ಸಲುವಾಗಿ ಎಂದೂ ಕೆಲಸ ಮಾಡಲಿಲ್ಲ. ಇನ್ನೊಬ್ಬರ ಸಲುವಾಗಿ ಕೆಲಸಾ ಮಾಡೂದು ಅವರ ಹುಟ್ಟು ಗುಣಾ ಆಗಿತ್ತು. ಅವರದು ಆಡಳಿತವರ್ಗದವರ ಜೊತೆಗೆ ಹೊಂದಾಣಿಕೆ ಭಾಳ. ಸ್ಟಾಫ್‌ದ ಮೇಲೆ ವಿಶ್ವಾಸ ಭಾಳ. ರೈತರೆಂದರೆ ಪಂಚ ಪ್ರಾಣ, ಕಾರ್ಮಿಕರೆಂದರೆ ಜೀವಾಳ. ರೈತರು, ಕಾರ್ಮಿಕರು ನಗುನಗುತಾ ಇರಬೇಕೆನ್ನುವವರು. ತಮ್ಮ ಸಮೀಪಕ್ಕೆ ಬಂದ ಜನರನ್ನು ರಾಜಕೀಯ ದೃಷ್ಟಿಯಿಂದ ನೋಡಲಿಲ್ಲ. ಸಾಮಾನ್ಯರ ಜೊತೆ ಭೇದಭಾವ ಮಾಡಲಿಲ್ಲ. ಗಾಡಿಡ್ರೈವರ್‌ನನ್ನೂ ಪಕ್ಕದಲ್ಲಿ ಕೂಡಿಸಿಕೊಂಡು ಊಟ ಮಾಡುತ್ತಿದ್ದರು. ಸಣ್ಣ ಹುಡುಗರ ಜೊತೆಗಂತೂ ಸಲಿಗೆಯ ಆಟ. ಅವರದು ಮಕ್ಕಳ ಮನಸಾಗಿತ್ತು. ಅವರು ಸಕ್ಕರೆ ಕಾರಖಾನೆಯಲ್ಲಿರುವಷ್ಟು ದಿವಸ ಎಲ್ಲರನ್ನು ಪ್ರೀತಿ ವಿಶ್ವಾಸದಿಂದ ನೋಡಿಕೊಂಡರು. ಅದು ಅವರ ಸಹಜ ಸ್ವಭಾವ ಆಗಿತ್ತು".

* * *

10.2.2007 ರಂದು ಹುಕ್ಕೇರಿಯಲ್ಲಿ ಶ್ರೀ ರವೀಂದ್ರ ಶೆಟ್ಟಿ ಅವರನ್ನು ಭೇಟಿಯಾದೆ. ಅವರು ಸ್ಥಳೀಯ ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷರು. ವಿಶ್ವನಾಥ ಕತ್ತಿಯವರ ಸೇವೆ, ಸಾಧನೆಯನ್ನು ಕಣ್ಣಾರೆ ಕಂಡವರು. 'ಅವರನ್ನು ಕಂಡು ಮಾತಾಡಿರಿ' ಎಂದು ಸಂಕೇಶ್ವರದ ಸಕ್ಕರೆ ಕಾರಖಾನೆಯಲ್ಲಿದ್ದ ಜಯಸಿಂಗ್ ರಜಪೂತ ಅವರು ಹೇಳಿದ್ದರು. ಅವರು ತೋರಿಸಿದ ದಾರಿ ಹಿಡಿದು ಅಲ್ಲಿಗೆ ಹೋದಾಗ ರವೀಂದ್ರ ಶೆಟ್ಟಿಯವರು ತುಂಬ ಅಭಿಮಾನದಿಂದ ವಿಶ್ವನಾಥ ಕತ್ತಿಯವರ ಸಾಧನೆಯನ್ನು ಸ್ಮರಿಸಿಕೊಂಡರು:

"He is great who makes everybody feel great-ಚೇಸ್ಟರ್‌ಸನ್‌ನ ಈ ಾತನ್ನು ವಿಶ್ವನಾಥರ ಸಾಮಿಪ್ಯದಲ್ಲಿ ನಾನು ಅನುಭವಿಸಿದ್ದೇನೆ."

"ವಿಶ್ವನಾಥರು ಸದಾ ಹಸನ್ಮುಖಿ. ಅವರ ಮುಖಭಾವದಲ್ಲಿ ಸಿಟ್ಟನ್ನು ನೋಡಲೇ ಇಲ್ಲ. ಜನರ ಕಷ್ಟ ಸುಖ ಕೇಳುತ್ತಿದ್ದರು. ತಮ್ಮ ಕಷ್ಟ ಸುಖ ಹಂಚಿಕೊಳ್ಳುತ್ತಿದ್ದರು. ಈ ಗುಣದಿಂದಾಗಿಯೇ ಅವರು ಸಹಕಾರ ರಂಗದ ಧುರೀಣರಾಗಿ ಬೆಳೆದರು".

* * *

ಹುಕ್ಕೇರಿ ಕಾಲೇಜಿನ ಆಡಳಿತ ಮಂಡಳಿಯ ನಿರ್ದೇಶಕರಲ್ಲೊಬ್ಬರಾದ ಶ್ರೀ ಈರಣ್ಣ ತುಬಚಿ ಅವರನ್ನು ಕಂಡು ಮಾತನಾಡಿಸಿದಾಗ:

"ವಿಶ್ವನಾಥ ಕತ್ತಿ ಸಾಹುಕಾರರದು ನಿರ್ವೈರ ಭಾವ. ಎದುರಾಳಿಯ ಮನಸ್ಸು ಗೆಲ್ಲುವ ಸಾಮರ್ಥ್ಯ ಇತ್ತು. ಅನ್ನದಾನದಲ್ಲಿ ಅವರದ್ದು ಎತ್ತಿದ ಕೈ. ಈ ಔದಾರ್ಯ ಗುಣದಿಂದಾಗಿ ಬಡವರ ಸೈನ್ಯ ಅವರ ಹಿಂದೆ ಇತ್ತು."

"ಸಾಹುಕಾರರು ಈ ಭಾಗದಲ್ಲಿ ಎಷ್ಟು ಕೆಲಸ ಮಾಡಿದರೆಂದರೆ ಇನ್ನೊಮ್ಮೆ ಚುನಾವಣೆ ಬಂದಾಗ ತಮ್ಮ ವಿರುದ್ಧ ಯಾರೂ ನಿಲ್ಲಬಾರದು ಅನ್ನೋ ಹಂಗ ಕೆಲಸ ಮಾಡಿದರು. ಈ ಕ್ಷೇತ್ರ ಬೆಳೆಸಿದರು."

"ಕರಗಾವಿಯ ಡಿ.ಟಿ. ಪಾಟೀಲರು ಮತ್ತು ನಮ್ಮ ವಿಶ್ವನಾಥ ಕತ್ತಿ ಸಾಹುಕಾರರ ನಡುವೆ ತಾತ್ವಿಕ ಭಿನ್ನಾಭಿಪ್ರಾಯಗಳಿದ್ದವು. ಆದರೆ ಇಬ್ಬರೂ ತುಂಬ ಆತ್ಮೀಯರಾಗಿದ್ದರು. ವೈಯಕ್ತಿಕವಾಗಿ ಅವರಿಬ್ಬರು ರಾಮಾಯಣದ ಲವ-ಕುಶರಂತೆ ಇದ್ದರು"

* * *

ಸಂಕೇಶ್ವರ ಶುಗರ್ ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿರುವ ಗಡಹಿಂಗ್ಲಜ ತಾಲೂಕಿನ ಇದರಗುಚ್ಚಿ ಗ್ರಾಮದ ಕಲ್ಲಪ್ಪ ದುಂಡಪ್ಪ ಕಾಡಪ್ಪನವರ ಅವರನ್ನು ಭೇಟಿಯಾದಾಗ ವಿಶ್ವನಾಥ ಕತ್ತಿಯವರ ಅಂತಃಕರಣದ ಸೌಜನ್ಯವನ್ನು ಸ್ಮರಿಸಿಕೊಂಡು ಭಾವಪರವಶರಾದರು. ಅವರ ಮಾತುಗಳಲ್ಲಿಯೇ ಕೇಳುವುದಾದರೆ:

"ವಿಶ್ವನಾಥ ಸಾಹುಕಾರರು ಕಾರಖಾನೆಯ ನೌಕರರನ್ನು ತಮ್ಮ ಮನೆಯ ಮಕ್ಕಳಂತೆ ನೋಡಿಕೊಂಡವರು. ಅವರ ಕಷ್ಟ ಸುಖಗಳನ್ನು ಕೇಳಿ ಪರಿಹಾರ ದೊರಕಿಸಲು ಪ್ರಯತ್ನಿಸಿದರು. 'ನಮ್ಮ ನೆನಹಾದಾಗಲೆ ಉದಯ, ನಮ್ಮ ಮರೆತಾದಾಗಲೆ ಅಸ್ತಮಾನ' ಎಂಬ ಬಸವಣ್ಣನವರ ವಚನದಂತೆ ವಿಶ್ವನಾಥ ಸಾಹುಕಾರರನ್ನು ನೆನೆವುದೇ ನಮ್ಮ ಭಾಗ್ಯ. ಮಾನವೀಯ ಅಂತಃಕರಣವುಳ್ಳ ಸಾಹುಕಾರರು ಇರುವವರೆಗೆ ನಮಗೆಲ್ಲ ಯಾವುದೇ ರೀತಿಯ ಕೊರತೆ ಇರಲಿಲ್ಲ. ಈಗಲೂ ಅಷ್ಟೇ, ಅವರ ಮಕ್ಕಳಾದ ರಮೇಶ ಸಾಹುಕಾರರು ತಂದೆಯಂತೆಯೇ ನಮ್ಮ ಕಷ್ಟ ಸುಖ ಕೇಳುತ್ತಾರೆ. ತಂದೆಯ ಎಲ್ಲ ಆದರ್ಶಗಳನ್ನು ಅತ್ಯಂತ ಶ್ರದ್ಧೆಯಿಂದ ಪಾಲಿಸುತ್ತಿದ್ದಾರೆ. ವಿಶ್ವನಾಥ ಸಾಹುಕಾರರು ಈ ಭಾಗದ ರೈತರಿಗೆಲ್ಲ ಆಶ್ರಯದಾತರಾಗಿದ್ದರು. ಅಂಥವರು ಕೋಟಿಗೊಬ್ಬರು.ಅವರು ಚಿರಕಾಲ ಉಳಿಯುವ ಮಾನವ ಸ್ವರೂಪದ ದೇವಮಾನವರು"

* * *

ಬೆಳಗಾವಿಯಲ್ಲಿ ನನಗೆ ಪರಿಚಿತರಾದ ವಿಜಯನಗರದ ವಿಶ್ವನಾಥ ಗುರುಶಾಂತಪ್ಪ ಬೋರಣ್ಣವರ ಮೂಲಕ ಅವರ ಸೋದರ ಮಾವಂದಿರಾದ ಅಪ್ಪಾಸಾಹೇಬ ಅಲ್ಲಪ್ಪ ಶಿರಗೂರ ಇವರನ್ನು ಸಂದರ್ಶಿಸಿದೆ:

"ಮಾನ್ಯ ಸಚಿವರಾದ ಶ್ರೀ ಉಮೇಶ ಕತ್ತಿಯವರೊಂದಿಗೆ ನನ್ನದು ನಿಕಟ ಸಂಬಂಧ. ಅವರ ತಂದೆಯವರಾದ ವಿಶ್ವನಾಥ ಕತ್ತಿ ಸಾಹುಕಾರರನ್ನು ತುಂಬಾ ಹತ್ತಿರದಿಂದ ನೋಡಿದ್ದೇನೆ. ಆದರೆ ಒಡನಾಟ ಅಷ್ಟು ಇರಲಿಲ್ಲ. ನಮ್ಮ ಅಜ್ಜನ ಕಾಲದಿಂದಲೂ ಈ ಕತ್ತಿ ಮನೆತನದವರಿಗೂ ನಮ್ಮ ಹಿರಿಯರಿಗೂ ಆತ್ಮೀಯವಾದ ಸಂಬಂಧವಿತ್ತು....

ವಿಶ್ವನಾಥ ಕತ್ತಿಯವರು ನಗುನಗುತಾ ಮಾತನಾಡುವ ವ್ಯಕ್ತಿ. ಅವರನ್ನು ಭೇಟಿಯಾಗಿ ಮಾತನಾಡಿಸಿದರೆ ನಮ್ಮ ಅರ್ಧ ಕೆಲಸ ಆದಷ್ಟು ಮನಸ್ಸು ಹಗುರಾಗುತ್ತಿತ್ತು. ಅವರದು ಶುದ್ಧ ಹಸ್ತ, ಸೌಮ್ಯ ಮಾತು, ಸೌಮ್ಯ ನಡವಳಿಕೆ. ಜನರನ್ನು ಸರಿಯಾದ ಹಾದಿಗೆ ಹಚ್ಚುವ ಔದಾರ್ಯ ಅವರದು. ಯಾವುದೇ ಚುನಾವಣೆಯಲ್ಲಿ ಅವರು ಸೋಲಲಿಲ್ಲ. ಜೀವನದಲ್ಲಿಯೂ ಸೋಲರಿಯದ ಸರದಾರ ಅವರು.

ಸಂಕೇಶ್ವರದ ಶುಗರ್ ಫ್ಯಾಕ್ಟರಿ, ಪಂತ ಬಾಳೇಕುಂದ್ರಿಯ ಸ್ಪಿನ್ನಿಂಗ್ ಮಿಲ್, ಬೆಳಗಾವಿಯ ಡಿ.ಸಿ.ಸಿ ಬ್ಯಾಂಕ್, ಕೆ.ಎಲ್.ಇ. ಶಿಕ್ಷಣ ಸಂಸ್ಥೆ–ಮುಂತಾದ ಸಂಸ್ಥೆಗಳಲ್ಲಿ ಅವರು ಜನರ ಹಿತೈಷಿಯಾಗಿ, ಜನಪರ ಧ್ವನಿಯಾಗಿ ಕೆಲಸ ಮಾಡಿದರು. ಹುಕ್ಕೇರಿ, ಸಂಕೇಶ್ವರ, ಘಟಪ್ರಭಾ ಈ ಭಾಗದ ಕುಗ್ರಾಮಗಳ ಸುಧಾರಣೆಗಾಗಿಯೂ ಸಾಹುಕಾರರು ಶ್ರಮಿಸಿದರು. ರೈತಮನೆತನದ ಹಿನ್ನೆಲೆಯಿಂದ ಬಂದವರಾಗಿದ್ದರಿಂದ ರೈತರ ಬಗೆಗೆ ಅತೀವ ಕಾಳಜಿ. ಅವರ ಕಷ್ಟ ಕಾಲದಲ್ಲಿ ನೆರವಾಗುತ್ತಿದ್ದರು. ಬಡ ರೈತರಿಗೆ ಪಂಪಶೆಟ್ ಕೊಡಿಸುವುದು, ಬೆಳೆಸಾಲ, ಗೊಬ್ಬರ ಸಾಲ ಕೊಡಿಸಿ ಅವರ ಏಳ್ಗೆಗಾಗಿ ದುಡಿಯುತ್ತಿದ್ದರು. ನೀರಿನ ಬವಣೆ ಇದ್ದ ಕಡೆಗೆಲ್ಲ ಲಿಫ್ಟ್ ಇರಿಗೇಶನ್ ಮಾಡಿಸಿದರು. ವಿಜಯನಗರ, ನಗುನಾಳ ಮತ್ತು ಇನ್ನೂ ಅನೇಕ ಹಳ್ಳಿಗಳು ನೀರಿನ ಸೌಕರ್ಯ ಪಡೆಯುವುದಕ್ಕೆ ವಿಶ್ವನಾಥ ಕತ್ತಿಯವರ ಪ್ರಯತ್ನ ಪರಿಶ್ರಮವೇ ಕಾರಣವೆನ್ನಬೇಕು"

ಅಪ್ಪಾಸಾಹೇಬರ ಸೋದರ ಅಶೋಕ ವಕೀಲರು ಹೇಳುವಂತೆ:

"1983 ಮತ್ತು 1984ರ ಅವಧಿಯಲ್ಲಿ ನಾನು ಸಾಹುಕಾರರ ಜೊತೆಯಲ್ಲಿಯೇ ಇರುತ್ತಿದ್ದೆ. ಅವರ ರಾಜಕೀಯ ಜೀವನದ ಉಚ್ಛ್ರಾಯ ಕಾಲವದು. ಬೆಳಗಾವಿ

ಜಿಲ್ಲೆಯಲ್ಲಿಯೇ ಅವರು ದೊಡ್ಡ ನಾಯಕರಾಗಿ ಮಿಂಚುತ್ತಿದ್ದರು. 1984ಲ್ಲಿ ಉತ್ತರ ಕರ್ನಾಟಕದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆ ಕೆ.ಎಲ್.ಇ. ಸಂಸ್ಥೆಗೆ ಚುನಾವಣೆ ನಡೆದವು. ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದ ಇವರು ಎದುರಾಳಿ ಎ.ಕೆ. ಕೊಟ್ರಶೆಟ್ಟಿಯವರನ್ನು ಸುಲಭವಾಗಿ ಸೋಲಿಸಿದರು. 1974ರ ಸಂದರ್ಭ. ಆಗ ವಿಧಾನ ಪರಿಷತ್ ಸದಸ್ಯ ಸ್ಥಾನಕ್ಕೆ ಸ್ಥಳೀಯ ಸಂಸ್ಥೆಗಳ ಪರವಾಗಿ ಚುನಾವಣೆ ನಡೆಯಿತು. ವಿಶ್ವನಾಥ ಕತ್ತಿಯವರು ಸಂಸ್ಥಾ ಕಾಂಗ್ರೆಸ್ಸಿನ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಇವರ ವಿರುದ್ಧ ಚಿಕ್ಕೋಡಿಯ ವಕೀಲರಾದ ಎಂ.ವಿ. ಶೆಟ್ಟಿಯವರು ಕಾಂಗ್ರೆಸ್ಸಿನಿಂದ ಸ್ಪರ್ಧಿಸಿದ್ದರು. ಆ ಚುನಾವಣೆಯಲ್ಲಿ ಕತ್ತಿ ಸಾಹುಕಾರರಿಗೆ ಅತಿ ಹೆಚ್ಚು ಮತಗಳು ಬಂದವು. ಎದುರಾಳಿಗೆ ಕೇವಲ 80 ಮತಗಳು. ಫಲಿತಾಂಶ ಕೇಳಿದ ತಕ್ಷಣ ಸಾಹುಕಾರರ ಪ್ರತಿಕ್ರಿಯೆ ಏನೆಂದರೆ ಆ 80 ಜನರಿಗೆ ನಾನೇನು ಕೆಟ್ಟು ಮಾಡಿದ್ದೆ?' ಎಂಬುದು"

* * *

ವಿಶ್ವನಾಥ ಕತ್ತಿಯವರು ಬೆಳಗಾವಿಯ ಡಿ.ಸಿ.ಸಿ. ಬ್ಯಾಂಕಿನ ನಿರ್ದೇಶಕರಾಗಿದ್ದ ಅವಧಿಯಲ್ಲಿ ಬ್ಯಾಂಕಿನ ಮ್ಯಾನೇಜರ್ ಆಗಿದ್ದ ವ್ಹಿ.ಎಂ. ಪಟ್ಟೇದ ಅವರು ಸಾಹುಕಾರರ ಕಾರ್ಯವೈಖರಿಯನ್ನು ಸ್ಮರಿಸಿಕೊಂಡರು: (ದಿನಾಂಕ: 10.9.2009 ಸ್ಥಳ: ಬೆಳಗಾವಿ)

"ಕತ್ತಿಯವರದು ಸ್ವಾರ್ಥ ಫ್ಯಾಮಿಲಿ ಅಲ್ಲ. ಪರೋಪಕಾರ, ಪರಸೇವೆ ಆ ಮನೆತನದವರ ರಕ್ತಗುಣವಾಗಿತ್ತು. ವಿಶ್ವನಾಥ ಕತ್ತಿಯವರು ನೋಡಲು ರಾಜಮನೆತನದವರಂತೆ ಕಾಣುತ್ತಿದ್ದರು. ಅವರನ್ನು ನೋಡಿದರೆ ಹೃದಯದಲ್ಲಿ ಪ್ರೀತಿ–ಗೌರವದ ಭಾವನೆಗಳು ಅರಳುತ್ತಿದ್ದವು. ಬ್ಯಾಂಕಿನ ಮೀಟಿಂಗ್ ಇದ್ದಾಗ ನಗುನಗುತಾ ಒಳಗೆ ಬರುತ್ತಿದ್ದರು. ವಿರೋಧ ಪಕ್ಷದವರೂ ಅವರ ನಗು ನೋಡಿ ಮೆತ್ತಗಾಗುತ್ತಿದ್ದರು. ಅವರದು ಆಕರ್ಷಕ ವ್ಯಕ್ತಿತ್ವ

ನೇರ ನುಡಿ, ನೇರ ನಡೆ. ಆಡಳಿತದಲ್ಲಿ ಕುಶಾಗ್ರಮತಿಯುಳ್ಳವರಾಗಿದ್ದರು. ಯಾರಾದರೂ ತಪ್ಪು ಮಾಡಿದ್ದರೆ ಅವರಾಗಿಯೇ ಒಪ್ಪಿಕೊಳ್ಳುವಂತೆ ಮಾಡುತ್ತಿದ್ದರು. ಹೊಟ್ಟೆಯೊಳಗಿನ ಮಾತು ಅವರಂತೆ ಹೇಳುವ, ಅವರಂತೆ ಕೇಳುವರನ್ನು ನಾನು ನೋಡಿಲ್ಲ. ವಿರೋಧ ಪಕ್ಷದಲ್ಲಿದ್ದರೂ ಜನರು ಅವರ ಬೆನ್ನು ಹತ್ತುತ್ತಿದ್ದರು. ಖರೇ ಅರ್ಥದಲ್ಲಿ ಅವರು ಲೀಡರ್ ಆಗಿದ್ದರು. ಜನಪರ ಕೆಲಸಗಳಲ್ಲಿ ಅವರೆಂದೂ ರಾಜಕೀಯ ತರಲಿಲ್ಲ. ಪಬ್ಲಿಕ್ ಫೇಸ್ ಮಾಡುವ ಕೆಪಾಸಿಟಿ ಅವರಲ್ಲಿ ಭಾಳ ಇತ್ತು.'

* * *

ವಿಶ್ವನಾಥ ಕತ್ತಿಯವರ ಆತ್ಮೀಯ ಗೆಳೆಯರಲ್ಲಿ ಒಬ್ಬರಾಗಿದ್ದ ಬಸವರಾಜ ಎಸ್. ಕತ್ತಿಯವರು (ಸೆಕ್ರಟರಿ) ನೆನಪಿಸಿಕೊಳ್ಳುವ ನುಡಿಚಿತ್ರ ಹೀಗಿದೆ:

"ಬೆಳಗಾವಿ ಜಿಲ್ಲೆಯ ರಾಜಕೀಯ ಧುರೀಣರಲ್ಲಿ ಎದ್ದು ಕಾಣುವ ವ್ಯಕ್ತಿತ್ವ ದಿವಂಗತ ಕತ್ತಿಯವರದು ಎಂದು ಹೇಳಿದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. 1958ರಿಂದ ಅವರು ದಿವಂಗತರಾಗುವರೆಗೆ ಸುಮಾರು 27 ವರ್ಷಗಳ ಕಾಲಾವಧಿಯವರೆಗೆ ಅವರನ್ನು ಸಮೀಪದಿಂದ ಕಂಡ ವ್ಯಕ್ತಿಗಳಲ್ಲಿ ನಾನು ಮತ್ತು ವ್ಯವಸಾಯ ಸೇವಾ ಸಹಕಾರಿ ಸಂಘದ ಚೇರಮನ್ನರಾದ ಶ್ರೀ ಶ್ರೀಪಾಲಪ್ಪಣ್ಣಾ ಮುನ್ನೋಳಿ ನಮ್ಮ ಮೂವರ ಗೆಳೆತನ ಒಂದು ವಿಶಿಷ್ಟ ಸ್ವರೂಪದ್ದಾಗಿತ್ತು. ದಿವಂಗತ ಕತ್ತಿಯವರ ರಾಜಕೀಯ ಜೀವನ ರೂಪಿಸುವದರಲ್ಲಿ ಅವರಿಗೆ ಸೇವೆ ಸಲ್ಲಿಸುವ ಸೌಭಾಗ್ಯ ದೊರಕಿದ್ದು ನಮಗಿಂದು ಹೆಮ್ಮೆ ಎನಿಸುತ್ತದೆ.

ದಿವಂಗತ ವಿಶ್ವನಾಥ ಕತ್ತಿಯವರ ಮತ್ತೊಂದು ವೈಶಿಷ್ಟ್ಯ ಗುಣವೆಂದರೆ ತಮ್ಮ ರಾಜಕೀಯ ವಿರೋಧಿಗಳನ್ನು ಆತ್ಮೀಯತೆಯಿಂದ ಕಂಡು ಅವರ ವಿಶ್ವಾಸ ಗಳಿಸಿ, ತಮ್ಮ ಕಾರ್ಯಗಳನ್ನು ಸಾಧಿಸುವ ಕಲೆ. ಈಗಿನ ರಾಜಕೀಯ ಧುರೀಣರಲ್ಲಿ ಅದು ಕಾಣಸಿಗುವುದಿಲ್ಲ. ತಮ್ಮ ಆರೋಗ್ಯದ ಕಡೆಗೆ ಚಿಂತಿಸದೆ ಎರಡು ಮೂರು ಸಲ ಹೃದಯ ವಿಕಾರ ಕಾಣಿಸಿಕೊಂಡಾಗಲೂ ಸಹ ಲೆಕ್ಕಿಸದೆ ತಮ್ಮ ಜೀವನವನ್ನು ಸಮಾಜಕ್ಕೆ ಅರ್ಪಿಸಿಕೊಂಡರು."

* * *

ವಿಶ್ವನಾಥ ಕತ್ತಿಯವರ ಒಡನಾಟದಲ್ಲಿದ್ದ ಆದರ್ಶ ಶಿಕ್ಷಕ ಬಿ.ಬಿ. ಕರಡಿಯವರು ಬರೆದಿರುವ ಮಾತುಗಳು:

"ಮಿತ್ರ, ತತ್ವಜ್ಞಾನಿ, ಮಾರ್ಗದರ್ಶಕ–(ಫ್ರೆಂಡ್, ಫಿಲಾಸಫರ್, ಆ್ಯಂಡ್ ಗೈಡ್)

ಒಬ್ಬ ಶ್ರೇಷ್ಠ ಮುಂದಾಳುವನ್ನು ಆಂಗ್ಲಭಾಷೆಯಲ್ಲಿ ವರ್ಣಿಸುವ ರೂಢಿಗತ ಪದಗಳಿವು. ಇವುಗಳನ್ನು ಇಲ್ಲಿ ಎತ್ತಿಕೊಳ್ಳುವ ಕಾರಣವೆಂದರೆ ಶ್ರೀ ವಿಶ್ವನಾಥರಿಗೆ ನೂರಕ್ಕೆ ನೂರರಷ್ಟು ಅನ್ವಯವಾಗುವ ಪದಗಳಿವು ಎಂಬುದನ್ನು ಅವರ ಸನಿಹದಲ್ಲಿದ್ದವರೆಲ್ಲ ಕಂಡುಕೊಂಡಿದ್ದಾರೆ. ಲೇಖನದುದ್ದಕ್ಕೂ ಶ್ರೀಯುತರ ಸ್ನೇಹಪರತೆಯ ಪ್ರಸ್ತಾಪ ಹಾಸುಹೊಕ್ಕಾಗಿ ಮಾಡಿದೆ. ವೈಯಕ್ತಿಕ ಸ್ತರದಲ್ಲಿಯೂ

ಸಂಘ-ಸಂಸ್ಥೆಗಳ ಚಾಲನೆಯ ವಿಷಯದಲ್ಲಿಯೂ ಶ್ರೀಯುತರು ತಮ್ಮದೇ ಶೈಲಿಯಲ್ಲಿ ಮಾರ್ಗದರ್ಶನ ಮಾಡುತ್ತಿದ್ದುದು ಉಂಟು. ಇವರ ಈ "ರಾಜಿ" ಮಾಡಿಸುವ ಗುಣದಿಂದಾಗಿ ಅನೇಕ ಒಳಜಗಳಗಳು ಮಾಯವಾಗಿವೆ. ಪರಸ್ಪರ ತಪ್ಪು ತಿಳುವಳಿಕೆಯಿಂದಾಗಿ ಒಬ್ಬರನ್ನೊಬ್ಬರು ಅಗಲುತ್ತಿದ್ದ ಮಿತ್ರರು ಮತ್ತೆ ಒಂದಾಗಿದ್ದುದೂ ಉಂಟು. ತತ್ವಜ್ಞಾನಿಯ ರೀತಿಯಲ್ಲಿ ಶ್ರೀಯುತರು ಪ್ರಸ್ತುತ ಸಾಮಾಜಿಕ ಹಾಗು ಆರ್ಥಿಕ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದರು. ಅವರು ಸೂಚಿಸುತ್ತಿದ್ದ ಪರಿಹಾರವು ಅತ್ಯಂತ "ವ್ಯವಹಾರಿಕ" (ಪ್ರ್ಯಾಕ್ಟಿಕಲ್) ಆಗಿರುತ್ತಿತ್ತು. ಅಪಾರ ಅನುಭವದ ಹಿನ್ನೆಲೆ ಆ ಪರಿಹಾರ ಮಾರ್ಗಕ್ಕಿರುತ್ತಿತ್ತು. ಪ್ರಸ್ತುತ ಬೃಹದಾಕಾರದಲ್ಲಿ ಬೆಳೆದು ನಿಂತಿರುವ ಕೃಷಿ ಸೇವಾ ಸಹಕಾರಿ ಬ್ಯಾಂಕಿಗೆ ಸಂದ ಶ್ರೀಯುತರ ಮಾರ್ಗದರ್ಶನವನ್ನೇ ಇಲ್ಲಿ ನಿದರ್ಶನವನ್ನಾಗಿ ನೋಡಬಹುದು. ಶ್ರೀಯುತರು ಚೇರಮನ್ನರಾಗಿದ್ದ ಅವಧಿಯಲ್ಲಿ ಈ ಸಂಘದ ಮೂಲಕ ಸಾಲ ಸೌಲಭ್ಯ ಮಾತ್ರವಲ್ಲದೇ ಕೃಷಿಗೆ ಬೇಕಾಗುವ ರಸಾಯನಿಕಗಳ ವಿತರಣೆಯನ್ನು ಪ್ರಾರಂಭಿಸಲಾಯಿತು. ಸದಸ್ಯರಿಗೆ ನಿತ್ಯೋಪಯೋಗಿ ವಸ್ತುಗಳಾದ ಸಕ್ಕರೆ, ವನಸ್ಪತಿ ಎಣ್ಣೆ, ಇತ್ಯಾದಿಗಳ ಪುರವರ ನಡೆಯಿತು. ಈ ಎಲ್ಲ ಸೌಲಭ್ಯಗಳ ಪ್ರಯೋಜನ ಪಡೆದ ಬಡ ಕುಟುಂಬಗಳ ಸಂಖ್ಯೆ ಸಹಸ್ರ ಸಹಸ್ರ ಸಂಖ್ಯೆಯನ್ನು ಮೀರುವಂತಿದೆ. ಸ್ಮರಣ ಸಂಚಿಕೆಯಲ್ಲಿ ಶ್ರೀಯುತರ ವ್ಯಕ್ತಿ ಪರಿಚಯ ಮಾಡಿಕೊಡುವುದರ ಮೂಲಕ "ಕೃಷಿ ಸೇವಾ ಸಹಕಾರಿ ಬ್ಯಾಂಕು" ತನ್ನ ಶ್ರದ್ಧಾಂಜಲಿ ಸಲ್ಲಿಸುವ ಸಮಯೋಚಿತ ಕಾರ್ಯ ಮಾಡಿ ಕೃತಾರ್ಥವಾಗಿದೆ. ಅರ್ಬನ್ ಬ್ಯಾಂಕಿನವರು ತಮ್ಮ ನೂತನ ಭವ್ಯ ಕಟ್ಟಡದ ಬದಿಯಲ್ಲಿಯೇ ವಿಶ್ವನಾಥರ ಸುಂದರ ಪುತ್ಥಳಿಯನ್ನು ನಿರ್ಮಿಸಿ ಅದು ತಮ್ಮ ಶಾಶ್ವತ ಶ್ರದ್ಧಾಂಜಲಿ ಎನ್ನುವ ರೀತಿಯಲ್ಲಿ ನಲ್ಲಿಸಿದ್ದಾರೆ.

ಮನೆಯಲ್ಲಿ ಶ್ರೀಯುತರ ಸುಪುತ್ರರಿಬ್ಬರೂ ತಂದೆಯ ಸಮಾಜ ಸೇವಾಕಾಂಕ್ಷೆಯ ಹೆಜ್ಜೆಯ ಗುರುತುಗಳನ್ನು ಆಧಾರವಾಗಿಟ್ಟುಕೊಂಡು, ಅದೇ ದಾರಿಯಲ್ಲಿ ಮುನ್ನಡೆಯುವುದರ ಮೂಲಕ ತಂದೆಯ ಆತ್ಮಕ್ಕೆ ಶಾಂತಿ ಸಂತೃಪ್ತಿಯನ್ನು ನೀಡುತ್ತಲಿದ್ದಾರೆ. ಈ ಸೇವಾ ಪರಂಪರೆ ಮುಂದುವರೆದಷ್ಟು ಸಮಯ ನಾಡಿನ ಭಾಗ್ಯ ಬೆಳೆಯುತ್ತಲೇ ಹೋಗುತ್ತದೆ. ಡಿ.ವಿ.ಜಿಯವರ ಈ ನುಡಿಗಳು ಇಲ್ಲಿ ಪ್ರಸ್ತುತವೆನಿಸಿವೆ:

ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಗಸು
ಹೊಸ ಯುಕ್ತಿ ಹಳೆ ತತ್ವದೊಡಗೂಡೆ ಧರ್ಮ
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜನವು ಜನ ಜೀವನಕ್ಕೆ–ಮಂಕುತಿಮ್ಮ

ಸಾಹುಕಾರರ ಮುದ್ದಿನ ಮಗಳು, ಈಗ ಅಥಣಿಯ ಖ್ಯಾತ ವೈದ್ಯರೆನಿಸಿದ ಡಾ. ಎ.ಎ. ಪಾಂಗಿಯವರ ಧರ್ಮಪತ್ನಿ ಶ್ರೀಮತಿ ಪೂರ್ಣಿಮಾ ಪಾಂಗಿಯವರು ತಂದೆಯ ವ್ಯಕ್ತಿತ್ವ ಬಣ್ಣಿಸುವುದು ಹೀಗೆ :

"ತಂದೆಯವರ ಕಾರಿನ ಹಾರ್ನ್ ಕೇಳಿದರೆ ಸಾಕು ನಾವೆಲ್ಲ ಆಟ ಬಿಟ್ಟು ಗಡಿಬಿಡಿಯಿಂದ ಮನೆಯೊಳಗೆ ಧಾವಿಸುತ್ತಿದ್ದೆವು. ಇದ್ದ ಬಿದ್ದ ಪುಸ್ತಕ ಹಿಡಿದು ಓದಲು ಕೂಡುತ್ತಿದ್ದೆವು. ನಮ್ಮ ನಾಟಕ ತಂದೆಯವರಿಗೆ ಗೊತ್ತಾಗುತ್ತಿತ್ತು. ನಾವು ಉಲ್ಟಾ ಹಿಡಿದ ಪುಸ್ತಕಗಳನ್ನು ಸರಿಪಡಿಸಿ ಒಳಗೆ ಹೋಗುತ್ತಿದ್ದರು. ಊರಿಂದ ಬರುವಾಗ ಕೇಕ್, ಬಿಸ್ಕಿಟ್, ಹಣ್ಣು ಹಂಪಲ ಏನಾದರೂ ತಂದೇ ತರುತ್ತಿದ್ದರು. ವಾರಕ್ಕೆರಡು ಸಲ ಸಂಕೇಶ್ವರದ ಸಕ್ಕರೆ ಕಾರಖಾನೆಗೆ ಕರೆದುಕೊಂಡು ಹೋಗುತ್ತಿದ್ದರು. 'ಇವಳು ನನ್ನ ಮಗಳು' ಎಂದು ಅಪ್ಪಣಗೌಡರಿಗೆ ಹೆಮ್ಮೆಯಿಂದ ಹೇಳುತ್ತಿದ್ದರು. ಅವರೂ ಬಹಳ ಪ್ರೀತಿ ಮಾಡುತ್ತಿದ್ದರು. 'ನನ್ನ ಕಾಲ್ಗುಣದಿಂದಲೇ ನಮ್ಮ ಅಪ್ಪ ಫ್ಯಾಕ್ಟರಿಗೆ ಬಂದರು (1963)' ಎಂದು ನಕ್ಕು ಹೇಳುತ್ತಿದ್ದರು.

ನನ್ನ ಮದುವೆಯ ವಿಷಯದಲ್ಲಿ ತಂದೆಯವರು ಹೇಳಿದ ಒಂದು ಮಾತು ನನಗಿನ್ನೂ ನೆನಪಿದೆ. "ನನಗ ಬಡವ–ಶ್ರೀಮಂತ ಮುಖ್ಯ ಅಲ್ಲ, ರೂಪ–ಲಾವಣ್ಯ ಮುಖ್ಯ ಅಲ್ಲ. ಹುಡುಗ ಬುದ್ಧಿವಂತ ಇರಬೇಕು" ಅಂತಹ ವರನನ್ನೇ ಅವರು ಹುಡುಕಿದರು. ಅವರೇ ಡಾ. ಎ.ಎ. ಪಾಂಗಿ ಅವರು ವಿದ್ಯಾರ್ಥಿ ಜೀವನದಲ್ಲಿ ಬಂಗಾರದ ಪದಕ ಪಡೆದು ಪಾಸಾಗಿದ್ದರು. ಅಂತಹ ಪ್ರತಿಭಾವಂತ ಪತಿ ದೊರೆತದ್ದು ನನ್ನ ಸುದೈವ. ಅವರೊಡನೆ ಇದ್ದಾಗ ತಂದೆಯವರ ಕಣ್ಣಂಚಿನಲ್ಲಿ ಸಂತೋಷದ ಕಣ್ಣೀರನ್ನು ನೋಡಿದ್ದೇನೆ."

* * *

ಕೊನೆಯದಾಗಿ ಇದುವರೆಗೆ ಹೇಳದಿರುವ ಮಾತೊಂದಿದೆ. ಅದನ್ನು ಡಿ.ವಿ.ಜಿಯವರ ಕಗ್ಗದ ನುಡಿಯಲ್ಲಿ ಹೇಳಬೇಕು.

ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ-ಸಕ್ಕರೆಯಾಗು ದೀನ ದುರ್ಬಲರಿಂಗೆ
ಎಲ್ಲರೊಳಗೊಂದಾಗು-ಮಂಕುತಿಮ್ಮ

ವಿಶ್ವನಾಥ ಕತ್ತಿಯವರದು ಪಾದರಸದಂತಹ ವ್ಯಕ್ತಿತ್ವ. ವೃದ್ಧರಿಂದ ಮಕ್ಕಳವರೆಗೆ ಎಲ್ಲರೊಂದಿಗೆ ಬೆರೆತು ಬಾಳುವ ಗುಣ ಅವರಲ್ಲಿತ್ತು. ಹೀಗಾಗಿ ಎಲ್ಲೇ ಇರಲಿ ಅವರು ಏಕಾಂಗಿಯಾಗಿರಲಿಲ್ಲ. ಅವರಿದ್ದಲ್ಲಿ ಮಕ್ಕಳು, ಅವರಿದ್ದಲ್ಲಿ ಬಳಗ, ಅವರಿದ್ದಲ್ಲಿ ಗೆಳೆಯರ ಗುಂಪು-ಸಭೆ-ಸಮಾರಂಭಗಳು ನೆರೆಯುತ್ತಿದ್ದವು.

ವ್ಯಕ್ತಿ (Person)ಎಂದರೆ ಗಾತ್ರ, ಎತ್ತರ, ಬಣ್ಣ, ವೇಷ-ಭೂಷಣ-ಭಾವ ಭಂಗಿಯ ದರ್ಶನವಾಗುವುದು. ಇದು ಷಡ್ಧಾತು ಸಂಯೋಜಿತವಾದುದು. ವ್ಯಕ್ತಿತ್ವ ವ್ಯಕ್ತಿಯೊಳಗೆ ಪ್ರಕಾಶಿಸುವ ಕ್ಷಮೆ, ದಯೆ, ಶಾಂತಿ, ಸ್ಥೈರಣೆ, ಸತ್ಯ ಮತ್ತು ನಿತ್ಯಗಳೆಂಬ ಷಡ್ಗುಣ ಸಹಿತವಾದುದು. ವ್ಯಕ್ತಿ-ವ್ಯಕ್ತಿತ್ವಗಳ ಸಂಬಂಧ ಅವಿನಾಭಾವ ಸಂಬಂಧ; ಬಿಂಬ ಪ್ರತಿಬಿಂಬ ಸಂಬಂಧ. ವಿಶ್ವನಾಥ ಕತ್ತಿಯವರ ಚರಿತ್ರೆಯಲ್ಲಿ ಅವುಗಳ ಪರಿಚಯವಾದರೆ ಈ ಪ್ರಯತ್ನ ಸಾರ್ಥಕವಾಗುತ್ತದೆ.

* * * * *

ಸಗ್ಗದಿಂದಿಳಿದು ಬಾ
ಸಾಧನೆಯ ನೋಡ ಬಾ
ಸಂತಸದ ನಮನಗಳ ಸ್ವೀಕರಿಸು ಬಾ

ಶ್ರಮಿಕರ ಬಾಳಿನ ಸರದಾರ
ಸಹಕಾರ ಕ್ಷೇತ್ರದ ಸಾಹುಕಾರ
ಸಕ್ಕರೆ ಕಾರ್ಖಾನೆ ಸುಧಾರಕ

– ಟಿ. ಸಿ. ಮೊಹರೆ



F-4

ಚಲನೆಯೇ ಚೇತನದ ಚಿಹ್ನೆ, ನಿರಂತರವಾಗಿ ಎಚ್ಚತ್ತಿರುವುದೇ
ನಿಜವಾದ ಎಚ್ಚರಿಕೆಯ ಕುರುಹು, ಬುದ್ಧಿಸದಾ ನೂತನ
ವಿಚಾರಗಳಲ್ಲಿ ತೊಡಗುತ್ತಿರುವುದೇ ಆತ್ಮ ಪ್ರಗತಿಯ ಪ್ರಥಮ ಸೋಪಾನ

– ಶ್ರೀ ಕುವೆಂಪು

# 2

# ಬೆಲ್ಲದಬಾಗೇವಾಡಿ

## ಬೆವರ ತೊರೆಗೆ ಬೆಲ್ಲದ ಕೆಸರು

ಸಂಸದೀಯ ಪಟುವಾಗಿದ್ದ ವಿಶ್ವನಾಥ ಕತ್ತಿ ಅವರ ಊರು ಬೆಲ್ಲದ ಬಾಗೇವಾಡಿ. ಬೆಳಗಾವಿ ಜಿಲ್ಲೆಯ ಸಹಕಾರಿ ರಂಗದಲ್ಲಿ ಬೆಳ್ಳಿಚಿಕ್ಕೆಯಂತೆ ಬೆಳಗುತ್ತಿರುವ ಊರಿದು. ಬಹಳ ಹಿಂದಿನಿಂದಲೂ ಇಲ್ಲಿ ವ್ಯಾಪಾರ ಹಾಗು ಸಹಕಾರ ಕ್ಷೇತ್ರಗಳಲ್ಲಿ ಅದ್ವಿತೀಯ ಸಾಧನೆ ನಡೆದಿದೆ. ಈ ಊರು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಪೂರ್ವ ದಿಕ್ಕಿಗೆ 15 ಕಿ.ಮೀ. ಅಂತರದಲ್ಲಿದೆ. ಮೊದಲು ಈ ಊರಿನ ಹೆಸರು ಬಾಗೇವಾಡಿ ಎಂದೇ ಇತ್ತು. ಒಂದು ಕಾಲದಲ್ಲಿ ಈ ಬಾಗೇವಾಡಿಯು ಕಬ್ಬಿನ ಕೃಷಿಗೆ, ಬೆಲ್ಲದ ವ್ಯಾಪಾರಕ್ಕೆ ಹೆಸರುವಾಸಿಯಾಗಿತ್ತು. ಬೆಲ್ಲವನ್ನು ಮಾರಲು ಮತ್ತು ಖರೀದಿಸಲು ಜನರು ದೂರ ದೂರದ ಸ್ಥಳಗಳಿಂದ ಇಲ್ಲಿಗೆ ಬರುತ್ತಿದ್ದರಂತೆ. ಬೆಲ್ಲದ ವಹಿವಾಟಿನ ಕೇಂದ್ರಸ್ಥಳವಾಗಿ ಬೆಳೆದ ಮೇಲೆ ಈ ಊರ ಹೆಸರಿಗೆ 'ಬೆಲ್ಲದ' ಎಂಬ ವಿಶೇಷಣ ಸೇರಿಕೊಂಡಿತು; ಜನರ ಬಾಯಲ್ಲಿ 'ಬೆಲ್ಲದ ಬಾಗೇವಾಡಿ' ಎಂದಾಯಿತು.

ಹುಕ್ಕೇರಿಯಿಂದ ಬೆಲ್ಲದಬಾಗೇವಾಡಿ ಮಾರ್ಗವಾಗಿ ಹೊರಟರೆ, ಒಂದಿಷ್ಟು ಹಾದಿಯನ್ನು ಕ್ರಮಿಸಿದರೆ ಸಾಕು, ಸುತ್ತಮುತ್ತಲಿನ ಹೊಲಗದ್ದೆಗಳಿಂದ ಹಸಿರಿನ ಬೆಳೆಸಿರಿ ಕಣ್ಮನ ಸೆಳೆಯುತ್ತದೆ. ಅಕ್ಟೋಬರ್–ನವೆಂಬರ್ ತಿಂಗಳಾಗಿದ್ದರೆ ಸಮೃದ್ಧವಾಗಿ ಬೆಳೆದು ನಿಂತ ಕಬ್ಬು, ಗೋವಿನಜೋಳ, ಇನ್ನಿತರ ಬೆಳೆಗಳನ್ನು ನೋಡಲು ಎರಡು ಕಣ್ಣು ಸಾಲವು. ಕಂಗೊಳಿಸುವ ಬೆಳೆಸಾಲು ದಾರಿಹೋಕರನ್ನು ಕೈಬೀಸಿ ಕರೆಯುತ್ತವೆ. ಊರು ಸಮೀಪಿಸಿದಂತೆಯೆ ಎದ್ದು ಕಾಣುವ ಒಳ್ಳೊಳ್ಳೆಯ ಕಟ್ಟಡಗಳು ಊರಿನ ಶ್ರೀಮಂತಿಕೆಯನ್ನು ಸಾರುತ್ತವೆ. ಊರನ್ನು ಪ್ರವೇಶಿಸಿದರೆ ಗ್ರಾಮ ಸುಧಾರಣಾ ಸಮಿತಿಯ ಆರೋಗ್ಯಧಾಮ, ವ್ಹಿ.ಎಂ.ಕತ್ತಿ ಶಿಕ್ಷಣ ಸಂಸ್ಥೆ, ಕಲಾ ಪೋಷಕರ ಸಂಘ, ಅರ್ಬನ್ ಬ್ಯಾಂಕ್, ಕೃಷಿ ಸೇವಾ ಸಹಕಾರಿ ಬ್ಯಾಂಕ್–ಇತ್ಯಾದಿ ಸಂಸ್ಥೆಗಳು; ಊರು ನಾಗರಿಕರ ಸಹಕಾರ, ಸಹಬಾಳ್ವೆಯ ಶ್ರೀಮಂತ ಜೀವನಕ್ಕೆ ಸಾಕ್ಷಿ ನುಡಿಯುವಂತಿವೆ. ನೂರಾರು ವರುಷಗಳ ಹಿಂದೆ ಬರಗಾಲಕ್ಕೆ ಹೆಸರಾಗಿದ್ದ ಊರು ಇಂದು ಸಾಧಿಸಿದ ಪ್ರಗತಿ ನೋಡಿದರೆ ನಿಜಕ್ಕೂ ಬೆರಗಾಗುತ್ತದೆ. ಈ ಬೆರಗಿನ ಹಿಂದಿರುವ ಸತ್ಯ ಎಂದರೆ ಸಹಕಾರ.

**ಒಂದೂಗೂಡಲಿ ಜಗದ ಸಕಲ ಹಸಕಾರಿಗಳೆ,**
**ಎಂದಿಗೂ ಸಡಿಲದಿಹ ಮೈತ್ರಿಯೊಳಗೆ**

ಸ್ವಾತಂತ್ರ್ಯ ಶಾಂತಿ ದಯೆ ಧರ್ಮವನು ಶ್ರದ್ಧೆಯಲಿ,
ಪ್ರೀತಿಯಲಿ ರೂಢಿಸುವ ದೀಕ್ಷೆಗೊಳಿರಿ
ಕದಲದೀ ತತ್ವಗಳೆ ದಿಟದ ನಾಗರಿಕತೆಯ
ಸದನವನು ನಿಲ್ಲಿಸುವ ಕಂಬಗಳು

ಎಂಬ ತೀನಂಶ್ರೀ ಅವರ 'ಸಹಕಾರ ಗೀತೆ'ಯ ಸಾಲುಗಳು ಇಲ್ಲಿ ನೆನಪಾಗುತ್ತವೆ. ಬೆಲ್ಲದ ಬಾಗೇವಾಡಿಯ ಈ ಬೆಳವಣಿಗೆ ಹಿಂದೆ ಸಹಕಾರದ ಶಕ್ತಿ ಇದೆ. ಸಹಬಾಳ್ವೆಯ ತತ್ವವಿದೆ. ಹಿರಣ್ಯಕೇಶಿ ಸಹಕಾರಿ ಕಾರಖಾನೆ ಮತ್ತು ಹಿಡಕಲ್ ಜಲಾಶಯದ ನೀರು, ಕತ್ತಿ ಮನೆತನದ ಸಹಾಯ, ಇನ್ನೂ ಅನೇಕ ಹಿರಿಯರ ನಿಸ್ವಾರ್ಥ ಸೇವೆ, ವಿಶ್ವನಾಥ ಕತ್ತಿಯವರ ಪ್ರಯತ್ನ ಇಲ್ಲಿಯ ಜನರ ಬದುಕಿನ ಚಿತ್ರವನ್ನೇ ಬದಲಿಸಿವೆ. ನೋಬಲ್ ಪಾರಿತೋಷಕ ಪಡೆದ ಡಾ. ಶ್ಯೂ ಮೇಕರ್ ಎಂಬ ವಿದ್ವಾಂಸ ಹೇಳಿದ 'ಸಣ್ಣದು ಸುಂದರ' (Small, the beautifull)ಎಂಬ ಸಿದ್ಧಾಂತವು ಇಲ್ಲಿ ಸಾಕಾರವಾಗಿದೆಯೆನಿಸುತ್ತದೆ.

ಹಳ್ಳಿಯ ಮೂಲ ಉದ್ಯೋಗವಾಗಿದ್ದ ಕೃಷಿಯನ್ನೇ ಕೇಂದ್ರವಾಗಿರಿಸಿಕೊಂಡು ಅದರ ಸುತ್ತ ಇಲ್ಲಿಯ ಆಧುನಿಕ ಕಾರ್ಯಚಟುವಟಿಕೆಗಳು ಬೆಳೆದಿವೆ. ಒಂದು ಹಳ್ಳಿ ಏಕಕಾಲಕ್ಕೆ ತನ್ನ ನೆಲದ ಗುಣದಿಂದ, ತನ್ನ ಜನದ ಬಲದಿಂದ, ಸಹಕಾರ-ಸೇವಾಭಾವದ ಸದೃಢ ಸಂಕಲ್ಪದಿಂದ ಹೇಗೆ ಸ್ವಾವಲಂಬಿ ಜೀವನವನ್ನು ಸಾಧಿಸಬಹುದು? ಆಧುನಿಕ ಸಂದರ್ಭಕ್ಕೆ ತಕ್ಕಂತೆ ಆರ್ಥಿಕ, ಸಾಮಾಜಿಕ ಬದುಕನ್ನು ಹೇಗೆ ಸುಂದರವಾಗಿ ರೂಪಿಸಿಕೊಳ್ಳಬಹುದು ಎನ್ನಲು ಈ ಊರಿನ ಇತಿಹಾಸವನ್ನು ಅವಲೋಕಿಸಬೇಕು.

ಬೆಲ್ಲದ ಬಾಗೇವಾಡಿಯ ಈಗಿನ ಜನಸಂಖ್ಯೆ ಅಂದಾಜು ಹತ್ತುಸಾವಿರ. ಇಲ್ಲಿಯ ಮಣ್ಣು, ನೀರು, ಗಾಳಿ-ಬೆಳಕು, ಕಬ್ಬಿನ ಬೆಳೆಗೆ ಈ ಪರಿಸರ ಹೆಚ್ಚು ಹಿತವಾದುದು. ಕಪ್ಪು ಮತ್ತು ಕೆಂಪು ಮಿಶ್ರಿತ ಮಣ್ಣು ಸತ್ವಯುತವಾದುದು. ಹಿಡಕಲ್ ಜಲಾಶಯದ ಚಿಕ್ಕೋಡಿ ಎಡದಂಡೆ ಕಾಲುವೆಯಿಂದ ಹರಿದು ಬರುವ ನೀರು ಊರಿನ ಅರ್ಧದಷ್ಟು ರೈತರಿಗೆ ವರದಾನವಾಗಿದೆ. ಕಬ್ಬು, ಗೋವಿನ ಜೋಳ ಇಲ್ಲಿಯ ಪ್ರಮುಖ ಬೆಳೆಗಳು. ಸಂಕೇಶ್ವರದಲ್ಲಿ ಸಕ್ಕರೆ ಕಾರಖಾನೆ ಸ್ಥಾಪನೆಯಾದ ಮೇಲೆ ಊರಿನ ಬದುಕೇ ಬದಲಾಯಿತು. ಜನರ ಬದುಕು ಬೆಲ್ಲದಿಂದ ಸಕ್ಕರೆಯ ಸಿಹಿಗೆ ಬಡತಿಯಾಯಿತು. ರೈತರು ಸಕ್ಕರೆ ಕಾರಖಾನೆಯ ಸದಸ್ಯರಾದರು. ಸಹಕಾರ ತತ್ವದ ಮೇಲೆ ಶ್ರಮಪಟ್ಟು ದುಡಿಯಲು ಮುಂದಾದರು. ಸಕ್ಕರೆ ಕಾರಖಾನೆಯೂ ಅವರ ಬೆಂಬಲಕ್ಕೆ ನಿಂತಿತು. ಊರು ಅಭಿವೃದ್ಧಿಯ ಹಾದಿ ಹಿಡಿಯಿತು.

ಬೆಲ್ಲದ ಬಾಗೇವಾಡಿ ಬೆಳುವಲದ ಹಳ್ಳಿಯಾದರೂ ಮಲೆನಾಡಿಗೂ ಹತ್ತಿರ. ಐದಾರು ಪಟ್ಟಣಗಳಿಂದ ಆವೃತ್ತವಾಗಿರುವ ಮಧ್ಯವರ್ತಿ ಊರು. ಇದರಿಂದ ವ್ಯಾಪರ ವಹಿವಾಟು ಚಟುವಟಿಕೆಗಳಿಗೆ ತುಂಬ ಅನುಕೂಲವಿದೆ. ತಾಲ್ಲೂಕು ಕೇಂದ್ರವಾದ ಹುಕ್ಕೇರಿಯು ಇಲ್ಲಿಂದ ಕೇವಲ 15 ಕಿ.ಮೀ. ಅಂತರದಲ್ಲಿದೆ. ಗೋಕಾಕ, ಚಿಕ್ಕೋಡಿ, ರಾಯಬಾಗ– ತಾಲೂಕು ಸ್ಥಳಗಳು ಇಲ್ಲಿಂದ ಹೆಚ್ಚು ಕಡಿಮೆ 25–30 ಕಿ.ಮೀ. ಅಂತರದಲ್ಲಿವೆ. 10 ಕಿ.ಮೀ. ಅಂತರದಲ್ಲಿ ಘಟಪ್ರಭಾ ಇದೆ. 20 ಕಿ.ಮೀ. ಅಂತರದಲ್ಲಿ ಸಂಕೇಶ್ವರ ಇದೆ. ಒಟ್ಟಾರೆ ಆಯಕಟ್ಟಿನ ಸ್ಥಳದಲ್ಲಿ ನೆಲೆಸಿರುವ ಬೆಲ್ಲದ ಬಾಗೇವಾಡಿಯು ಹಳ್ಳಿಯಾದರೂ ಪಟ್ಟಣಗಳಿಗೆ ಮಾದರಿಯಾಗಿ ಬೆಳೆಯುತ್ತಿರುವ ಒಂದು ಆದರ್ಶ ಗ್ರಾಮವಾಗಿದೆ.

ಸಹಕಾರ ಇಲ್ಲಿಯ ಜನರ ಜೀವನ ಮಂತ್ರ. ಫಲವತ್ತಾದ ಮಣ್ಣಿನಲ್ಲಿ ಬೆವರು ಸುರಿಸಿ ದುಡಿಯುವ ರೈತರು, ಊರ ಏಳಿಗೆಗಾಗಿ ಹಲವು ಹತ್ತು ಯೋಜನೆಗಳನ್ನು ರೂಪಿಸುವ ಜನನಾಯಕರು, ಊರ ಪ್ರಗತಿಗಾಗಿ ಧಾರಾಳವಾಗಿ ಧನ ಸಹಾಯ ಮಾಡುವ ಶ್ರೀಮಂತರು–ಇವರೆಲ್ಲರ ಪ್ರಯತ್ನದಿಂದಾಗಿ ಬೆಲ್ಲದ ಬಾಗೇವಾಡಿ ಬೆಳಗಾವಿ ಜಿಲ್ಲೆಯಲ್ಲಿಯೇ 'ಅಭಿವೃದ್ಧಿ ಹೊಂದಿದ ಹಳ್ಳಿ'ಯಾಗಿದೆ.

ಭಾರತದಲ್ಲಿ ಸಹಕಾರ ಚಳವಳಿ ಆರಂಭವಾಗಿದ್ದ ಕಾಲದಲ್ಲಿಯೇ ಈ ಊರಿನಲ್ಲಿಯೂ ಸಹಕಾರಿ ಚಟುವಟಿಕೆಗಳು ಆರಂಭವಾದವು. ಸಹಕಾರಿ ರಂಗದಲ್ಲಿ ಶಿಖರಪ್ರಾಯವಾದ ಎರಡು ದೊಡ್ಡ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ ಶ್ರೇಯಸ್ಸು ಈ ಊರಿನದು. 1905ರಲ್ಲಿ ಆರಂಭವಾದ 'ಕೃಷಿ ಸೇವಾ ಸಹಕಾರಿ ಸಂಘ'ವು ಬೆಳಗಾವಿ ಜಿಲ್ಲೆಯಲ್ಲಿಯೇ ಮೊದಲ ಸಹಕಾರಿ ಸಂಸ್ಥೆ. ಆಗಿನ ಮುಂಬಯಿ–ಕರ್ನಾಟಕ ಪ್ರದೇಶದಲ್ಲಿ ಎರಡನೆಯದು. (ಗದಗ ಜಿಲ್ಲೆಯ ಕಣಗಿನಹಾಳ ಗ್ರಾಮದಲ್ಲಿ 1905 ಮೇ 8 ರಂದು ಸ್ಥಾಪನೇಯಾದ 'ಒಕ್ಕಲುತನ ಪತ್ತಿನ ಸಹಕಾರಿ ಸಂಘ' ಮೊದಲನೆಯದು.) ಇದಾದ ಮೇಲೆ 1944 ರಲ್ಲಿ ಅಸ್ತಿತ್ವಕ್ಕೆ ಬಂದ 'ಬೆಲ್ಲದ ಬಾಗೇವಾಡಿ ಅರ್ಬನ್ ಕೋ–ಆಪ್ ಬ್ಯಾಂಕ್' (ಮೊದಲಿನ ಹೆಸರು, ಕೃಷಿ ಸೇವಾ ಸಹಕಾರಿ ಸಂಘ) ಇಂದು ಬೃಹತ್ತಾಗಿ ಬೆಳೆದಿದೆ. ಹಲವಾರು ಶಾಖೆಗಳನ್ನು ಹೊಂದಿ ಜಿಲ್ಲೆಯಲ್ಲಿಯೇ ಪ್ರತಿಷ್ಠಿತ ಬ್ಯಾಂಕ್ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇತ್ತೀಚಿನ ದಿನಗಳಲ್ಲಿ ಸಹಕಾರಿ ರಂಗ ಸ್ವಾರ್ಥ–ಸಮಸ್ಯೆಗಳ ಆಗರವಾಗಿ, ಸಹಕಾರಿ ಬ್ಯಾಂಕುಗಳು ನೆಲ ಕಚ್ಚುತ್ತಿರುವ ಸನ್ನಿವೇಶದಲ್ಲಿ ಈ ಬ್ಯಾಂಕ್ ಭೀಮಬಲ ಹೊಂದಿ ಗಟ್ಟಿಯಾಗಿ ನಿಂತಿದ್ದು ಹೆಮ್ಮೆಯ ಸಂಗತಿ. ಸಹಕಾರ ಕ್ಷೇತ್ರದಲ್ಲಿ ಅತ್ಯುತ್ತಮ ಸಾಧನೆ ಮಾಡಿದ ಸಂಸ್ಥೆಗಳಿಗೆ ಕೇಂದ್ರ ಸರಕಾರದ 'ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮ, ನವದೆಹಲಿ' ಕೊಡುವ 'ಉತ್ಕೃಷ್ಟ ಸಹಕಾರಿ' ಪ್ರಶಸ್ತಿಯು 2004ರಲ್ಲಿ ಇಲ್ಲಿಯ ಕೃಷಿಸೇವಾ

ಸಹಕಾರಿ ಬ್ಯಾಂಕಿಗೆ ದೊರೆತಿದೆ. 50,000 ನಗದು ಬಹುಮಾನ ಮತ್ತು ಪ್ರಶಸ್ತಿ ಫಲಕ ಹೊಂದಿರುವ ಈ ಪುರಸ್ಕಾರವನ್ನು ಪ್ರಧಾನಿ ಮನಮೋಹನಸಿಂಗ್ ಅವರು ಬ್ಯಾಂಕಿನ ಅಧ್ಯಕ್ಷ ಶ್ರೀ ಶ್ರೀಕಾಂತ ಶ್ರೀಮಂಧರ ಖೇಮಲಾಪುರೆ ಅವರಿಗೆ ದೆಹಲಿಯ ವಿಜ್ಞಾನಭವನದಲ್ಲಿ ದಿನಾಂಕ 16.11.2004 ರಂದು ಪ್ರದಾನ ಮಾಡಿದರು. ಬ್ಯಾಂಕಿನ ಶತಮಾನೋತ್ಸವ ಸಂದರ್ಭದಲ್ಲಿ ದೊರೆತ ಉತ್ಕೃಷ್ಟ ಗೌರವವಿದು. ಸಾಧನೆಗೆ ಸಂದ ಹೆಮ್ಮೆಯ ಗರಿ ಇದು.

ಬೆಲ್ಲದ ಬಾಗೇವಾಡಿಯ 'ಅರ್ಬನ್ ಕೋ-ಆಪ್ ಬ್ಯಾಂಕಿ'ಗೂ ಪ್ರತಿಷ್ಠಿತ ಪ್ರಶಸ್ತಿ ಲಭಿಸಿದೆ. ಈ ಪ್ರಶಸ್ತಿಯನ್ನು 27. 9. 2005 ರಂದು ಕೂಡಲಸಂಗಮದಲ್ಲಿ ಜರುಗಿದ 'ಸ್ವಾಭಿಮಾನಿ ಸಮಾವೇಶ'ದಲ್ಲಿ ಪ್ರದಾನ ಮಾಡಲಾಯಿತು. ಈ ಬ್ಯಾಂಕಿನ ವಜ್ರಮಹೋತ್ಸವ ಸಮಾರಂಭವು ಅದ್ದೂರಿಯಿಂದ ಜರುಗಿದೆ. ಮಾನ್ಯ ಉಮೇಶ ಕತ್ತಿ ಹಾಗು ಮಾನ್ಯ ರಮೇಶ ಕತ್ತಿ ಅವರ ಕನಸಿನ ಮತ್ತು ಮಹತ್ವಾಕಾಂಕ್ಷೆಯ ಸಂಸ್ಥೆಯಾಗಿ 'ವಿಶ್ವನಾಥ ಶುಗರ್ಸ ಲಿಮಿಟೆಡ್, ಬೆಲ್ಲದ ಬಾಗೇವಾಡಿ' ಸಕ್ಕರೆ ಕಾರಖಾನೆಯು ಊರಿನ ಕೀರ್ತಿಗೆ ಮತ್ತೊಂದು ತುರಾಯಿ ಎನಿಸಿದೆ.

ಮಕ್ಕಳಿಗೆ ಶಿಕ್ಷಣ, ರೈತರಿಗೆ ನೀರು-ಗೊಬ್ಬರ, ಜನರಿಗೆ ಆರೋಗ್ಯಭಾಗ್ಯ ಕಲಾವಿದರಿಗೆ ಕಾಯಕಲ್ಪ ಕಲ್ಪಿಸುವ ಹಲವಾರು ಯೋಜನೆಗಳೂ ಈ ನೆಲದಲ್ಲಿ ಸಾಕಾರವಾಗಿವೆ. ಪರಸ್ಪರ ಸಹಕಾರವೇ ಇವುಗಳ ಮೂಲ ಬಂಡವಾಳ. ಸಹಕಾರ ತತ್ವದ ಮೇಲೆ ಗ್ರಾಮದ ಸರ್ವಾಂಗೀಣ ಪ್ರಗತಿ ಸಾಧಿಸಿದ ಏಕಮೇವ ಊರು ಎಂದು ಇತರರೂ ಹೆಮ್ಮೆಯಿಂದ ಬೆಲ್ಲದ ಬಾಗೇವಾಡಿಯತ್ತ ನೋಡುವಂತಾಗಿದೆ. ಇದು ಊರಿನ ಆಧುನಿಕ ಕಥೆಯಾದರೆ ಇದರ ಬೆನ್ನಿಗಿರುವ ಪ್ರಾಚೀನ ಚರಿತ್ರೆಯಾದರೂ ಗಮನಾರ್ಹವಾಗಿದೆ.

ಭಾಷಾವಾರು ಪ್ರಾಂತಗಳ ರಚನೆಗಿಂತ ಮೊದಲು ಬೆಲ್ಲದಬಾಗೇವಾಡಿ ಕೊಲ್ಲಾಪುರ ಸಂಸ್ಥಾನಕ್ಕೆ ಒಳಪಟ್ಟಿತ್ತು. ಚಿಕ್ಕೋಡಿ ಹತ್ತಿರದ ಹಿರೇಕೂಡಿಯ 'ಕದಂ ಸರಕಾರ' ಆಡಳಿತದಲ್ಲಿತ್ತು. ಬೆಲ್ಲದ ಬಾಗೇವಾಡಿ ಹಾಗೂ ಇತರ ಕೆಲವು ಗ್ರಾಮಗಳ ಉಸ್ತುವಾರಿಯನ್ನು 'ನಾಡಿಕರ' ಎಂಬ ಅಧಿಕಾರಿ ನೋಡಿಕೊಳ್ಳುತ್ತಿದ್ದ. ಈ ಅಧಿಕಾರಿಗೆ ಸಹಾಯ ಮಾಡಲು 'ಚಿಗರಿ' ಸರದಾರನಿದ್ದ. ಇವನು ಚಿಗರಿಯಂತೆ ತೀವ್ರಗತಿಯ ನಡಿಗೆಯಿಂದ ಬರುತ್ತಿದ್ದನೆಂದು ಇವನಿಗೆ 'ಚಿಗರಿ ಸರದಾರ' ಎಂದು ಜನ ಕರೆಯುತ್ತಿದ್ದರಂತೆ. ಈ ಚಿಗರಿ ಸರದಾರನ ಬಗೆಗೆ ಒಂದು ಕತೆ ಇದೆ.

"ಚಿಗರಿ ಸರದಾರನ ಕಾಲದಲ್ಲಿ ಮುಸಲ್ಮಾನ ಹಾಗೂ ಮರಾಠಾ ದಂಗೆಗಳು ಅಲ್ಲಲ್ಲಿ ನಡೆಯತೊಡಗಿದವಂತೆ. ಆಗ ಚಿಗರಿ ಸರದಾರನು ಮುಸಲ್ಮಾನರ ಪಕ್ಷ ವಹಿಸಿ, ಮರಾಠರನ್ನು ಹತ್ತಿಕ್ಕಲು ಪ್ರಯತ್ನಿಸಿದನು. ಇದನ್ನರಿತು ಕದಮ್ ಮತ್ತು

ನಣದಿಕರ ಇಬ್ಬರೂ ಚಿಗರಿ ಸರದಾರನನ್ನು ಬಗ್ಗುಬಡಿಯಲು ಪ್ರಯತ್ನಿಸಿದರು. ಅದೆಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಏನಾದರೂ ಮಾಡಿ ಚಿಗರಿ ಸರದಾರನನ್ನು ಕೊಲ್ಲಲೇಬೇಕೆಂಬ ಕರಾರಿನ ಮೇಲೆ ಚಿಗರಿ ಸರದಾರನ ಕಾರುಭಾರದಲ್ಲಿದ್ದ ಬೆಲ್ಲದಬಾಗೇವಾಡಿಯನ್ನು, ಹುಕ್ಕೇರಿ ತಾಲೂಕಿನ ನಿರಲಗಿ ಎಂಬ ಗ್ರಾಮದ ಇನಾಮದಾರರಿಗೆ ದತ್ತಿ ಹಾಕಿಕೊಟ್ಟರು. ನಂತರ ಆತ ಘೋಡಗೇರಿಯ "ಸರನಾಯಿಕ" ಎಂಬ ಸರದಾರನ ಮುಖಾಂತರ ಚಿಗರಿ ಸರದಾರನನ್ನು ಅವರಗೋಳ ಗ್ರಾಮದಲ್ಲಿ ಕೊಲ್ಲಿಸಿದರೆಂದು ತಿಳಿಯುತ್ತದೆ. ಚಿಗರಿ ಸರದಾರನ ಕೊಲೆಯಾದ ನಂತರವೂ ದಂಗೆಗಳು ಕಡಿಮೆಯಾಗಲಿಲ್ಲವಂತೆ. ಆಗ ಕೊಲ್ಲಾಪುರದ ದೊರೆಯು ಆ ದಂಗೆಗಳನ್ನು ಹತ್ತಿಕ್ಕಲು, ಬೆಲ್ಲದಬಾಗೇವಾಡಿಯನ್ನೊಳಗೊಂಡು ಈ ಭಾಗದ ಕೆಲವು ಗ್ರಾಮುಗಳನ್ನು ಬ್ರಿಟಿಷರಿಗೆ ಒಪ್ಪಿಸಿದರೆಂದು ಉಲ್ಲೇಖಗಳಿವೆ. ಈ ಗ್ರಾಮುದಲ್ಲಿರುವ ಶ್ರೀ ಮುಹಾಂತೇಶ್ವರಮುಠದ ಆಗಿನ ಸ್ವಾಮಿಗಳು ಮಹಿಮಾಪುರುಷರಾಗಿದ್ದರು. ಕೊಲ್ಲಾಪುರದ ದೊರೆಯು ಈ ಶ್ರೀಮಠದ ಅಧಿಪತಿಗಳಾಗಿದ್ದ ಮಹಾಂತ ಸ್ವಾಮಿಗಳ ಅಪಾರ ಮಹಿಮೆಯನ್ನರಿತು ಅವರ ಪರಮಭಕ್ತನಾದನೆಂದು ಈ ಮಠದಲ್ಲಿರುವ ಉಲ್ಲೇಖದಿಂದ ತಿಳಿದುಬರುತ್ತದೆ.

**(ಸ್ಮೃತಿ ಸಂಪುಟ : ಬೆಲ್ಲದಬಾಗೇವಾಡಿ ಅರ್ಬನ್ ಕೋ-ಆಪ್. ಬ್ಯಾಂಕ್ ಲಿ., ಕಟ್ಟಡದ ಉದ್ಘಾಟನಾ ಸಮಾರಂಭ 1988)**

ಊರಿಗೆ ಪ್ರಾಚೀನವಾದ ಇತಿಹಾಸವಿದೆ. ಇಲ್ಲಿರುವ ಜೈನಸಮುದಾಯ, ಇಲ್ಲಿಯ ಪುರಾತನ ದೇವಾಲಯಗಳು ಪ್ರಾಚೀನ ಬಾಗೇವಾಡಿಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಇಲ್ಲಿಯ ಕಲ್ಲುಬಸದಿ ಅತ್ಯಂತ ಹಳೆಯ ಬಸದಿ. ಕ್ರಿ.ಶ. 1355ರಲ್ಲಿ ಇದು ಜೀರ್ಣೋದ್ಧಾರವಾಗಿದೆ. ಕಲ್ಲುಬಸದಿ, ಜಡಿಸಿದ್ದೇಶ್ವರ, ಕಲ್ಮೇಶ್ವರ ದೇವಾಲಯ, ವಿಠ್ಠಲ ಮಂದಿರ, ಆದಿನಾಥ ತೀರ್ಥಂಕರ ಬಸದಿ, ಮಹಾಂತೇಶ್ವರ ವಿರಕ್ತಮಠ, ಶ್ರೀ ಗಜಾನನ ಗುಡಿಗಳಿವೆ. ಗ್ರಾಮದೇವರಾದ ಜಡಿಸಿದ್ದಪ್ಪನ ಗುಡಿಯಂತೂ ಊರ ಭಕ್ತರ ಶ್ರದ್ಧಾಕೇಂದ್ರವಾಗಿದೆ. ಗೋಪುರಾಕಾರದ ಗುಡಿಯ ಎದುರಿಗೆ ದೀಪಸ್ತಂಭವಿದೆ. ಪ್ರತಿ ವರುಷ ಶ್ರಾವಣ ತಿಂಗಳಲ್ಲಿ ಮೂರನೆಯ ಸೋಮವಾರ ಜಾತ್ರೆ ನಡೆಯುತ್ತದೆ. ಆಗ ಕುಸ್ತಿ, ಟಗರಿನ ಕಾಳಗ, ಗಾಡಿ ಶರ್ಯತ್ ಇತ್ಯಾದಿ ಗ್ರಾಮೀಣ ಕ್ರೀಡೆಗಳು ಅತ್ಯಂತ ಉತ್ಸಾಹದಿಂದ ಜರುಗುತ್ತವೆ. ಜಾತ್ರೆಯಲ್ಲಿ ಪಾಲ್ಗೊಂಡ ಐದಾರು ಸಾವಿರ ಜನರಿಗೆ ಹುಗ್ಗಿ ಊಟದ ಏರ್ಪಾಡು ಇರುತ್ತದೆ. 'ಹಳೆ ಬೇರು ಹೊಸ ಚಿಗುರು ಕೂಡಿರಲು ಮರ ಸೊಬಗು' ಎನ್ನುವಂತೆ ಬೆಲ್ಲದ ಬಾಗೇವಾಡಿಯು ಪರಂಪರೆ ಮತ್ತು ಆಧುನಿಕತೆಗಳನ್ನು ಮೇಳೈಸಿಕೊಂಡ ಸುಂದರ ಸಮನ್ವಯದ ಊರಾಗಿದೆ.

* * * * *

ಪ್ರೇಮವೇ ಶಿವ, ಶಿವನೇ ಪ್ರೇಮ;
ಪ್ರೀತಿಸುವುದೇ ಪ್ರಾಣದ ನೇಮ

– ಶ್ರೀ ಕುವೆಂಪು

## 3

# ಕತ್ತಿ ಮನೆತನದವರು

## ಸಹಕಾರ ರಂಗದ ಸಾಹುಕಾರರು

ಕತ್ತಿ ಮನೆತನಕ್ಕೂ ಬೆಲ್ಲದ ಬಾಗೇವಾಡಿಯ ಪ್ರಗತಿಗೂ ನಿಕಟವಾದ ಸಂಬಂಧವಿದೆ. ಈ ಊರಿನ ಅಭಿವೃದ್ಧಿಯಲ್ಲಿ ಈ ಮನೆತನದ ಪಾತ್ರ ಅಗ್ರಗಣ್ಯವಾದುದು. ಹಿರಿಯರೊಬ್ಬರು ಹೇಳಿದಂತೆ 'ಬೆಲ್ಲದ ಬಾಗೇವಾಡಿಯ ಇಂದಿನ ಉದ್ದಗಲದ ವಿಸ್ತಾರಕ್ಕೆ, ಎತ್ತರದ ಕೀರ್ತಿಶಿಖರಕ್ಕೆ ಶಕ್ತಿಯಾಗಿ ನಿಂತವರು ಕತ್ತಿ ಮನೆತನದವರು' ಈ ಮನೆತನದವರಿಂದ ಸಂದ ಕೊಡುಗೆ ಅಮೋಘವಾಗಿದೆ. ವಿಶೇಷವಾಗಿ ಆಧುನಿಕ ಬೆಲ್ಲದ ಬಾಗೇವಾಡಿಯ ನಿರ್ಮಾಣ ಕಾರ್ಯದಲ್ಲಿ ವಿಶ್ವನಾಥ ಕತ್ತಿಯವರ ಪ್ರಯತ್ನವಂತೂ ಅಗ್ರಮಾನ್ಯವಾದುದು. ಅನನ್ಯವಾದುದು' ಹಾಗೆ ನೋಡಿದರೆ ಕತ್ತಿಯವರು ಮೂಲತಃ ಈ ಊರಿನವರಲ್ಲ. ವ್ಯಾಪಾರ ಮಾಡುತ್ತ ಹೊರಗಿನಿಂದ ಬಂದವರು. ಈ ಮನೆತನದ ಪೂರ್ವಜರು ಯಾವಾಗ ಈ ಊರಿಗೆ ಬಂದರೆಂದು ಹೇಳಲು ಸ್ಪಷ್ಟವಾದ ಆಧಾರಗಳಿಲ್ಲ. 'ಬ್ಯಾಂಕಿನ ಸೆಕ್ರೆಟರಿ' ಎಂದೇ ಖ್ಯಾತರಾದ 80 ವರ್ಷದ ಶ್ರೀ ಬಸವರಾಜ ಸಂ. ಕತ್ತಿ ಅವರು ಈ ಕುರಿತು ಹೇಳುವ ಮಾತುಗಳು ಹೀಗಿವೆ:

'ನನಗಾದರೂ ಈ ಬಗೆಗೆ ಖಚಿತ ಮಾಹಿತಿ ಇಲ್ಲ. ಅಂದಾಜು ಏಳೆಂಟು ತಲೆಮಾರುಗಳ ಹಿಂದೆಯೇ ನಮ್ಮ ಹಿರಿಯರು ಇಲ್ಲಿಗೆ ಬಂದಿರಬಹುದು. ಅವರು ಘಟ್ಟದ ಕಡೆಯಿಂದ ಬಂದರೆಂದು ತಿಳಿಯುತ್ತದೆ. ಕತ್ತೆಯ ಮೇಲೆ ಮಸಾಲೆ ಸಾಮಾನು ಹೇರಿಕೊಂಡು ಊರೂರು ತಿರುಗುತ್ತ, ಮಸಾಲೆ ದಿನಸು ಮಾರುತ್ತಿದ್ದರಂತೆ. ಹೀಗೆ ಮಾರುತ್ತ ಬಾಗೇವಾಡಿಗೆ ಬಂದರು. ಇಲ್ಲಿಯ ಹವಾಗುಣ ಹಿಡಿಸಿತು. ಜನರ ಸ್ನೇಹ–ಸಹಕಾರವೂ ಸಿಕ್ಕಿತು. ಪರಿಣಾಮ ಇಲ್ಲಿಯೇ ನೆಲೆಸಿದರು. ಕಷ್ಟಪಟ್ಟು ದುಡಿದು, ವ್ಯಾಪಾರ ಉದ್ಯೋಗ ಮಾಡಿ ಮನೆ ಮಾರು ಮಾಡಿಕೊಂಡರು. ಭೂಮಿ ಕಾಣಿ ಗಳಿಸಿದರು. ಶ್ರೇಷ್ಠ ಒಕ್ಕಲಿಗರೆನಿಸಿದರು. ಇವರ ಪ್ರಾಮಾಣಿಕತೆ, ಪರೋಪಕಾರ ಬುದ್ಧಿಗೆ ಗೌರವದ ಸ್ಥಾನಮಾನಗಳೂ ದೊರೆತವು. ಕತ್ತೆಯ ಮೇಲೆ ಮಸಾಲೆ ಸಾಮಾನು ಹೇರಿಕೊಂಡು ವ್ಯಾಪಾರ ಮಾಡುತ್ತಿದ್ದುದರಿಂದ ಇವರಿಗೆ 'ಕತ್ತಿಯವರು' ಎಂಬುದು ಅಡ್ಡಹೆಸರಾಯಿತು" ಹೀಗೆ ಬಸವರಾಜ ಕತ್ತಿಯವರು ಮನೆತನದ ಹಿನ್ನೆಲೆ ವಿವರಿಸುತ್ತಾರೆ. ಆರಂಭದಲ್ಲಿ ಕತ್ತಿಯವರ ಮೂರು ಮನೆಗಳು ಇದ್ದವಂತೆ, ಅವು ಕ್ರಮೇಣ ಬೆಳೆದು, ವಿಭಕ್ತಗೊಳ್ಳುತ್ತ ಈಗ ಮೂವತ್ತಕ್ಕೂ ಹೆಚ್ಚು ಮನೆಗಳಾಗಿವೆ. ಜನರು ಆಡುಮಾತಿನಲ್ಲಿ ಈ ಮನೆತನದವರಿಗೆ 'ಕತ್ಯಾಗೋಳ' ಎಂದು ಕರೆಯುತ್ತಾರೆ.

ಬಲ್ಲಟ ಬಾಗೇವಾಡಿಯಲ್ಲಿ ಸಹಕಾರ ಚಳವಳಿಯ ಬೀಜ ಬಿತ್ತಿ, ಅದು ಹೆಮ್ಮರವಾಗಿ ಬೆಳೆಯಲು ಕಾರಣರಾದವರು ಕತ್ತಿ ಮನೆತನದವರು. 1905ರಲ್ಲಿಯೇ ಕೃಷಿ ಸೇವಾ ಸಹಕಾರಿ ಸಂಘ ಹುಟ್ಟು ಹಾಕಿ ಅದರ ಮೊದಲ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದವರು ಬಸಪ್ರಭಪ್ಪ ಮಲ್ಲಪ್ಪ ಕತ್ತಿ. ಇವರು ಸುತ್ತ ಮುತ್ತಲಿನ ಹಳ್ಳಿಗಳಿಗೇ ಶ್ರೀಮಂತರು. ಬಡರೈತರಿಗೆ, ವ್ಯಾಪಾರ ದಂಧೆ ಮಾಡುವವರಿಗೆ ಸಾಲ ಕೊಡುತ್ತಿದ್ದರು. ಸಾಲದ ಸದುಪಯೋಗ ಪಡೆದು ಎಲ್ಲರೂ ಸುಖವಾಗಿರಬೇಕು. ಆರ್ಥಿಕವಾಗಿ ಸುಸ್ಥಿತಿಗೆ ಬರಬೇಕೆಂಬುದೇ ಅವರ ಉದ್ದೇಶವಾಗಿತ್ತು. ಸಕಾಲದಲ್ಲಿ ಸಾಲ ಮರಳಿಸಿದವರನ್ನು ಸತ್ಕರಿಸಿ ಪ್ರೋತ್ಸಾಹಿಸುತ್ತಿದ್ದರು. ರೈತರಿಗೆ ಸಾಲ ಕೊಟ್ಟು ಸಹಾಯ ಮಾಡುವ ಇವರ ಔದಾರ್ಯವು ಮುಂದೆ ಸಹಕಾರದ ಶಿಸ್ತಿಗೆ ನಾಂದಿ ಹಾಡಿತು. 1905ರಲ್ಲಿ ಇವರು ಊರೊಳಗಿನ ಗಣ್ಯರಾದ ಚರಾಟಿ, ಬೆಲ್ಲದ, ಹೊನ್ನಹಳ್ಳಿ, ಮುನ್ನೋಳಿ, ಖೇಮಲಾಪುರ ಮನೆತನದವರನ್ನು ಕಂಡು, ಅವರೆಲ್ಲರ ಸಹಕಾರ ಪಡೆದು ಬಂಡವಾಳ ಸಂಗ್ರಹಿಸಿದರು. 20.12.1905 ರಂದು 'ರೂರಲ್ ಕ್ರೆಡಿಟ್ ಸೊಸಾಯಿಟಿ' ಪ್ರಾರಂಭಿಸಿದರು. 1915ರ ವರೆಗೆ ಸಂಘದ ಚೇರಮನ್ನರಾಗಿ ಬಸಪ್ರಭಪ್ಪ ಅವರು ಅಹೋರಾತ್ರಿ ಶ್ರಮಿಸಿದರು. ಅವರು ಅಂದು ಕಟ್ಟಿ ಬೆಳೆಸಿದ ಸಂಸ್ಥೆ ಇಂದು 'ಕೃಷಿ ಸೇವಾ ಸಹಕಾರಿ ಬ್ಯಾಂಕ ನಿ' ಆಗಿ ಬೆಳೆದಿದೆ. ಹನ್ನೆರಡು ಕೋಟಿಗೂ ಹೆಚ್ಚು ದುಡಿಯುವ ಬಂಡವಾಳ ಹೊಂದಿದೆ. ಈ ಭಾಗದ ರೈತರಿಗೆ ಕಾಮಧೇನು, ಕಲ್ಪವೃಕ್ಷವಾಗಿ ಪರಿಣಮಿಸಿದೆ. ಈ ಸಂಸ್ಥೆಯು 2005ರಲ್ಲಿ ಶತಮಾನೋತ್ಸವ ಆಚರಿಸಿತು. ಜನ್ಮದಾತ ಬಸಪ್ರಭಪ್ಪ ಕತ್ತಿ ಅವರನ್ನು ಗೌರವಪೂರ್ವಕವಾಗಿ ಸ್ಮರಿಸಿತು. 'ಕೃಷಿ ಸೇವಾ ಸಹಕಾರಿ ಬ್ಯಾಂಕ, ನಿ. ದ ಪಿತಾಮಹ' ಎಂದು ಅವರ ಗುಣಗಾನ ಮಾಡಿತು

ಬಸಪ್ರಭಪ್ಪ ಅವರ ನಂತರ ಎರಡನೆಯ ಚೇರಮನ್ನರಾಗಿ ಚನ್ನಬಸಪ್ಪ ಮಹಾಂತಪ್ಪ ಕತ್ತಿ, ಮೂರನೆಯ ಚೇರಮನ್ನರಾಗಿ ಮಲ್ಲಪ್ಪ ಸಾತಪ್ಪ ಕತ್ತಿ, ಐದನೆಯ ಚೇರಮನ್ನರಾಗಿ ಚೆನ್ನಮಲ್ಲಪ್ಪ ಮಹಾಂತಪ್ಪ ಕತ್ತಿ, ಏಳನೆಯ ಚೇರಮನ್ನರಾಗಿ ವಿಶ್ವನಾಥ ಕತ್ತಿ, ಹತ್ತನೆಯ ಚೇರಮನ್ನರಾಗಿ ಬಸವರಾಜ ವಿರೂಪಾಕ್ಷಪ್ಪ ಕತ್ತಿ, ಹನ್ನೊಂದನೆಯ ಚೇರಮನ್ನರಾಗಿ ಚೆನ್ನಬಸಪ್ಪ ವಿರೂಪಾಕ್ಷಪ್ಪ ಕತ್ತಿ ಈ ಎಲ್ಲ ಮಹನಿಯರು ಈ ಬ್ಯಾಂಕಿನ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಇತ್ತೀಚೆಗೆ ಸನ್ಮಾನ್ಯ ಉಮೇಶ ವಿಶ್ವನಾಥ ಕತ್ತಿ, ರಮೇಶ ವಿಶ್ವನಾಥ ಕತ್ತಿ ಸಹೋದರರು ಈ ಪರಂಪರೆಯ ನೇತೃತ್ವ ವಹಿಸಿದ್ದಾರೆ. ಜನಪ್ರಿಯ ಶಾಸಕರಾಗಿ, ಸಂಸದರಾಗಿ ಇವರು ಈ ಪ್ರದೇಶದ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ಹೀಗೆ ಕತ್ತಿ ಮನೆತನದವರೇ ಬೆಲ್ಲದ ಬಾಗೇವಾಡಿಯ ಸಹಕಾರ ಶಿಲ್ಪಿಗಳಾಗಿ ಊರಿನ ಏಳಿಗೆಯಲ್ಲಿ ಮಹತ್ವದ ಪಾತ್ರವಹಿಸಿದ್ದಾರೆಂಬುದು ಅಭಿಮಾನದ ಸಂಗತಿ. ತನಗಾಗಿ, ತನ್ನವರಿಗಾಗಿ

ಬದುಕುತ್ತಿರುವ ಇಂದಿನ ದಿನಮಾನದಲ್ಲಿ ಒಂದು ಊರಿಗಾಗಿ, ಸಮಾಜಕ್ಕಾಗಿ ಶ್ರಮಿಸಿದ ಕತ್ತಿ ಮನೆತನವು ಒಂದು ಅಪರೂಪದ ಮನೆತನವೆನಿಸಿದೆ.

'ಕೃಷಿ ಸೇವಾ ಸಹಕಾರಿ ಬ್ಯಾಂಕ್. ನಿ' ಜೊತೆಗೆ ಹೆಸರಿಸಬೇಕಾದ ಮತ್ತೊಂದು ಸಂಸ್ಥೆ ಎಂದರೆ 'ಬೆಲ್ಲದ ಬಾಗೇವಾಡಿ ಅರ್ಬನ್ ಸೌಹಾರ್ದ ಸಹಕಾರಿ ಬ್ಯಾಂಕ್ ನಿ' 2005 ರಲ್ಲಿ ಇದು ವಜ್ರಮಹೋತ್ಸವ ಆಚರಿಸಿತು. ಈ ಬ್ಯಾಂಕಿನ ನೀಲನಕ್ಷೆ ಸಿದ್ಧವಾದದ್ದು ಕೂಡ ವಿಶ್ವನಾಥ ಕತ್ತಿಯವರ ಮನೆಯಲ್ಲಿಯೇ. ವಿಶ್ವನಾಥ ಕತ್ತಿ ಅವರ ಅಣ್ಣ ಮುರಿಗೆಪ್ಪನವರೇ ಈ ಬ್ಯಾಂಕಿನ ಸ್ಥಾಪನೆಯಲ್ಲಿ ಮುಂದಾಳತ್ವ ವಹಿಸಿದ್ದರು. ವಜ್ರಮಹೋತ್ಸವದ ಸ್ಮರಣ ಸಂಚಿಕೆ 'ಸಹಕಾರ ಸಂಭ್ರಮ' (2005)ದಲ್ಲಿ ಬ್ಯಾಂಕಿನ ಸ್ಥಾಪನೆ ಕುರಿತು ಹೀಗೆ ಬರೆಯಲಾಗಿದೆ:

'ನಮ್ಮ ಗ್ರಾಮದಲ್ಲಿ ಬ್ಯಾಂಕನ್ನು ಸ್ಥಾಪಿಸಬೇಕೆಂದು ಪ್ರಮುಖ ವ್ಯಾಪಾರಿ ವರ್ಗದವರ ಸಭೆಯನ್ನು ದಿ. ಶ್ರೀ ಎಸ್.ಎನ್.ಅಂಗಡಿಯವರ ಅಧ್ಯಕ್ಷತೆಯಲ್ಲಿ ಮುರಿಗೆಪ್ಪ ಮಲ್ಲಪ್ಪ ಕತ್ತಿ ಇವರ ಮನೆಯಲ್ಲಿ ಕರೆಯಲಾಗಿತ್ತು. ಬ್ಯಾಂಕಿನ ಸೌಕರ್ಯವಿಲ್ಲದೇ ವ್ಯವಹಾರದ ಪ್ರಗತಿ ಸಾಧ್ಯವಿಲ್ಲವೆಂದು ಮನಗಂಡು ವ್ಯಾಪಾರಸ್ಥರು ಬ್ಯಾಂಕಿನ ಸೌಕರ್ಯಕ್ಕಾಗಿ ಬೇರೆ ಬೇರೆ ಸ್ಥಳಗಳಿಗೆ ಪರದಾಡುವುದನ್ನು ತಪ್ಪಿಸುವುದಕ್ಕಾಗಿ ಗ್ರಾಮದಲ್ಲಿ ಬ್ಯಾಂಕನ್ನು ಸ್ಥಾಪಿಸಿಯೇ ತೀರಬೇಕೆಂಬ ಹಟದಿಂದ ಪ್ರಯತ್ನ ಪಟ್ಟರು. ಆದರೆ ಎಷ್ಟು ಪ್ರಯತ್ನ ಪಟ್ಟರೂ ಬ್ಯಾಂಕಿನ ಸ್ಥಾಪನೆಗೆ ಬೇಕಾದ ರೂ. 20,000=00 ಶೇರು ಬಂಡವಾಳ ಕೂಡಿಸಲು ಸಾಧ್ಯವಾಗಲಿಲ್ಲ. ಕೇವಲ 16,000=00 ಶೇರು ಹಣ ಕಲೆ ಹಾಕಿ ದಿನಾಂಕ 25.11.1944 ರಂದು 'ಬೆಲ್ಲದ ಬಾಗೇವಾಡಿ ಅರ್ಬನ್ ಕೋ-ಆಪ್ ಸೊಸಾಯಿಟಿ' ಎಂದು ರಜಿಸ್ಟರ್ ಮಾಡಲಾಯಿತು. ಮುಂದೆ ಶೇರು ಬಂಡವಾಳಕ್ಕೆ ಕಡಿಮೆ ಬಿದ್ದ 4,000=00 ಹಣವನ್ನು ಮುರಿಗೆಪ್ಪ ಮಲ್ಲಪ್ಪ ಕತ್ತಿ ಇವರ ಹೆಸರಿನಿಂದ ಅವರ ಮಾವಂದಿರಾದ ದಿ. ಎಸ್.ಎನ್. ಅಂಗಡಿಯವರು ಕೊಡಿಸಿದ ನಂತರ 'ದಿ. ಬೆಲ್ಲದ ಬಾಗೇವಾಡಿ ಅರ್ಬನ್ ಕೋ-ಆಪ್ ಕ್ರೆಡಿಟ್ ಬ್ಯಾಂಕ ಲಿ.' ಅಂತಾ ಪರಿವರ್ತನೆ ಹೊಂದಿ ಕಾರ್ಯ ಪ್ರಾರಂಭಿಸಿತು. ಅರವತ್ತು ವರುಷಗಳ ದೀರ್ಘ ಇತಿಹಾಸ ಹೊಂದಿರುವ ಬ್ಯಾಂಕಿನ ಸ್ಥಾಪನೆಗೆ ಕತ್ತಿ ಮನೆತನದವರು ನೀಡಿದ ಸಹಾಯ ಸಹಕಾರ ಎಂದೂ ಮರೆಯಲಾಗದು'

ವಿಶ್ವನಾಥ ಕತ್ತಿಯವರ ಪರಂಪರೆಯನ್ನು ಅವರ ಸುಪುತ್ರರಾದ ಸನ್ಮಾನ್ಯ ಉಮೇಶ ಕತ್ತಿ ಅವರು, ಸನ್ಮಾನ್ಯ ರಮೇಶ ಕತ್ತಿ ಅವರು ಮುಂದುವರೆಸಿದ್ದಾರೆ. ಇವರು ಬೆಲ್ಲದ ಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆಯ ಅಭಿವೃದ್ಧಿ ಚಟುವಟಿಕೆಗಳಲ್ಲಿ ಮಹತ್ವದ ಪಾತ್ರವಹಿಸುತ್ತಿದ್ದಾರೆ. ಮಾನ್ಯ ಉಮೇಶ ಕತ್ತಿ ಅವರು

ಜನಪ್ರಿಯ ಶಾಸಕರಾಗಿ, ಸಚಿವರಾಗಿ ಈ ಭಾಗದ ಏಳಿಗೆಯಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತಿದ್ದಾರೆ. ಜೆ.ಎಚ್.ಪಟೇಲ್ ಸರಕಾರದಲ್ಲಿ ಸಕ್ಕರೆ ಸಚಿವರಾಗಿ ಮತ್ತು ಬೆಳಗಾವಿ ಜಿಲ್ಲೆಯ ಉಸ್ತುವಾರಿ ಸಚಿವರಾಗಿ ಕಾರ್ಯನಿರ್ವಹಿಸಿದ್ದಾರೆ. ಇತ್ತೀಚೆಗೆ ಬಿ.ಎಸ್.ಯಡಿಯೂರಪ್ಪನವರ ಸಂಪುಟದಲ್ಲಿ ತೋಟಗಾರಿಕೆ ಮತ್ತು ಬಂದಿಖಾನೇ ಇಲಾಖೆಯ ಸಚಿವರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಮಾನ್ಯ ರಮೇಶ ಕತ್ತಿ ಅವರು ಸಂಕೇಶ್ವರದ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆಯ ಅಧ್ಯಕ್ಷರಾಗಿ, ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿ ಕಾರ್ಯತತ್ಪರರಾಗಿದ್ದಾರೆ. 2009 ರಲ್ಲಿ ಜರುಗಿದ ಲೋಕಸಭಾ ಚುನಾವಣೆಯಲ್ಲಿ ಇವರು ಚಿಕ್ಕೋಡಿ ಮತಕ್ಷೇತ್ರದಿಂದ ಸ್ಪರ್ಧಿಸಿ ಪ್ರಚಂಡ ಬಹುಮತದಿಂದ ಆರಿಸಿ ಬಂದಿದ್ದಾರೆ. ಜನಪ್ರಿಯ ಸಂಸದರಾಗಿ ಜನಸೇವೆಯಲ್ಲಿ ತೊಡಗಿದ್ದಾರೆ. ಇವರೊಂದಿಗೆ ಬೆಲ್ಲದ ಬಾಗೇವಾಡಿಯ ಕತ್ತಿ ಮನೆತನದ ಸದಸ್ಯರು ಹಲವಾರು ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿದ್ದಾರೆ. ಊರ ಜನರೂ ಇವರ ಸೇವೆಯನ್ನು ಪ್ರೀತಿ–ಗೌರವಗಳಿಂದ ಕಾಣುವರು. ಇವರ ಜನಹಿತ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವರು.

* * * * *

ಮಕ್ಕಳು ದೇವರ ರಾಜ್ಯದ ಪ್ರಜೆಗಳು;
ಹಾಗೆಯೇ ತಾಯಿ ದೇವರಿಗೆ ಸಮಾನ

**– ಶ್ರೀ ಕುವೆಂಪು**

# 4

# ವಿಶ್ವನಾಥ ಕತ್ತಿ

## ಹಳೆ ಬೇರು-ಹೊಸ ಚಿಗುರು

ಆಧುನಿಕ ಕರ್ನಾಟಕದ ನಕ್ಷೆಯಲ್ಲಿ ಬೆಳಗಾವಿ ಜಿಲ್ಲೆಗೆ ವಿಶೇಷ ಸ್ಥಾನವಿದೆ. ರಾಜ್ಯದಲ್ಲಿ ಇದು 'ಸಕ್ಕರೆ ಜಿಲ್ಲೆ' ಎಂದೇ ಹೆಸರಾಗಿದೆ. ಈ ಜಿಲ್ಲೆಯ ಸಹಕಾರಿ ಸಂಸ್ಥೆಗಳು ರಾಜ್ಯಕ್ಕೇ ಮಾದರಿಯಾಗಿವೆ. ಇಲ್ಲಿಯ ಸಮಶೀತೋಷ್ಣ ಹವೆ ಅಹ್ಲಾದಕರವೆನಿಸಿ, ಬಂದವರಿಗೆಲ್ಲ ಇಲ್ಲಿಯೇ ನೆಲೆಯೂರುವಂತೆ ಮಾಡಿದೆ. ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಚಟುವಟಿಕೆಗಳಿಂದ ಇವತ್ತಿಗೂ ರಾಜ್ಯದಲ್ಲಿಯೇ ಮುಂಚೂಣಿಯಲ್ಲಿದೆ ಬೆಳಗಾವಿ ಜಿಲ್ಲೆ. ಈ ಕಾರಣಕ್ಕಾಗಿಯೇ ರಾಜ್ಯದ ಎರಡನೆಯ ರಾಜಧಾನಿ ಎಂಬ ಗೌರವಕ್ಕೂ ಪಾತ್ರವಾಗುತ್ತಿದೆ.

ಬೆಳಗಾವಿಯ ಇವತ್ತಿನ ಈ ಬೆಳವಣಿಗೆಯ ಹಿಂದೆ ಅನೇಕ ಜನರ ಶ್ರಮವಿದೆ, ತ್ಯಾಗವಿದೆ. ಸೇವೆಗೆ ಮಾದರಿಯಾಗುವ ಅನೇಕ ಹಿರಿಯರು ಈ ನೆಲದಲ್ಲಿ ಆಗಿ ಹೋಗಿದ್ದಾರೆ. ಸ್ವಾತಂತ್ರ್ಯ ಚಳವಳಿಗೆ ಸ್ಫೂರ್ತಿಯಿತ್ತ ಕಿತ್ತೂರ ಚೆನ್ನಮ್ಮ, ಬೆಳವಡಿ ಮಲ್ಲಮ್ಮ; ಸ್ವಾಭಿಮಾನದ ಹೋರಾಟಕ್ಕೆ ಹೆಸರಾದ ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣ; ಸ್ವಾತಂತ್ರ್ಯ ಚಳವಳಿಗೆ ಧುಮುಕಿದ ಗಂಗಾಧರರಾವ್ ದೇಶಪಾಂಡೆ, ಅಣ್ಣೂ ಗುರೂಜಿ, ವಾಲಿ ಚೆನ್ನಪ್ಪ; ಗಾನಪ್ರತಿಭೆಯಿಂದ ಸಂಗೀತಕ್ಷೇತ್ರ ವಿಸ್ತರಿಸಿದ ಕುಮಾರ ಗಂಧರ್ವ; ನಾಡಿನುದ್ದಗಲಕ್ಕೂ 'ಪಾರಿಜಾತ' (ಬಯಲಾಟ)ದ ಕಂಪು ಪಸರಿಸಿದ ಕುಲಗೋಡ ತಮ್ಮಣ್ಣ, ಕೌಜಲಗಿ ನಿಂಗಮ್ಮ; ಕಂಪನಿ ನಾಟಕಗಳ ಅಭಿರುಚಿ ಬಿತ್ತಿದ ಕೊಣ್ಣೂರ ಶಿವಮೂರ್ತಿಸ್ವಾಮಿ, ಚಿಕ್ಕೋಡಿ ಶಿವಲಿಂಗಸ್ವಾಮಿ, ಮುರುಗೋಡ ಗಂಗಾಧರಪ್ಪ, ಏಣಗಿ ಬಾಳಪ್ಪ, ಗೋಕಾಕ ಬಸವಣ್ಣೆಪ್ಪ; ಶಿಕ್ಷಣ ಕ್ಷೇತ್ರದಲ್ಲಿ ಡಿ.ಸಿ.ಪಾವಟೆ; ಎಸ್.ಸಿ. ನಂದೀಮಠ; ಇಂಜನಿಯರಿಂಗ್‌ದಲ್ಲಿ ಎಸ್.ಜಿ. ಬಾಳೇಕುಂದ್ರಿ, ವೈದ್ಯಕ್ಷೇತ್ರದಲ್ಲಿ ಬಿ.ಎಸ್.ಜೀರಗೆ; ಸಹಕಾರ ಕ್ಷೇತ್ರದಲ್ಲಿ ಎಂ.ಪಿ. ಪಾಟೀಲ, ಅಪ್ಪಣ್ಣಗೌಡ ಪಾಟೀಲ, ಕಾವ್ಯಕ್ಷೇತ್ರದಲ್ಲಿ ಡಿ.ಎಸ್.ಕರ್ಕಿ, ಎಸ್.ಡಿ. ಇಂಚಲ, ಸಂಶೋಧನೆಯಲ್ಲಿ ಆ.ನೇ. ಉಪಾಧ್ಯೆ, ಶಂ.ಬಾ.ಜೋಶಿ, ಕುಂದಣಗಾರ ಇತ್ಯಾದಿ ಅನೇಕ ಮಹನೀಯರ ಸೇವೆಯನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಇಂತಹ ಶ್ರೀಮಂತ ಪರಂಪರೆಗೆ ಮುಕುಟಮಣಿಯಾಗಿರುವ ನಾಗನೂರು ರುದ್ರಾಕ್ಷಿಮಠದ ಪೂಜ್ಯಶ್ರೀ ಶಿವಬಸವ ಸ್ವಾಮಿಗಳ ತ್ರಿವಿಧ ದಾಸೋಹವನ್ನು,

ಕೆ.ಎಲ್.ಇ. ಸಂಸ್ಥೆಯ ಸಪ್ತರ್ಷಿಗಳ ಶಿಕ್ಷಣ ದಾಸೋಹವನ್ನು ಭಕ್ತಿ ಗೌರವದಿಂದ ನೆನೆಯಬೇಕು. ಸೇವಾಭಾವಕ್ಕೂ, ಸೇವಾಬದುಕಿಗೂ ಇದು ಪ್ರಸಿದ್ಧವಾದ ಜಿಲ್ಲೆ. ಸೇವೆಗೈದ ಹಿರಿಯರಲ್ಲಿ ಬೆಲ್ಲದ ಬಾಗೇವಾಡಿಯ ವಿಶ್ವನಾಥ ಕತ್ತಿಯವರೂ ಒಬ್ಬರು. ಇವರ ಸೇವೆಯ ಮಾದರಿ 'ಮನೆಗೆದ್ದು ಮಾರು ಗೆಲ್ಲು'ವ ಪರಿ. 'ನನ್ನ ಊರು ಚೆನ್ನಾಗಿರಬೇಕು. ನನ್ನ ಜನ ಸುಖವಾಗಿರಬೇಕು. ಎಲ್ಲರೂ ಸಂತೋಷದಿಂದ ಬಾಳು ಸಾಗಿಸುತಿರಬೇಕೆ'ಂಬುದು ಅವರ ಸಂಕಲ್ಪವಾಗಿತ್ತು. ಅವರ ಸಂಕಲ್ಪ ಸಹಕಾರ ಸಂಸ್ಥೆಗಳ ಮೂಲಕ, ಗ್ರಾಮಸುಧಾರಣಾ ಸಮಿತಿ ಮೂಲಕ ಸಾಕಾರವಾಯಿತು. ಸಕಲರ ಲೇಸಿಗಾಗಿ ತುಡಿಯುವ ಅವರ ಮನಸ್ಸು ಅವರನ್ನು ಉತ್ಸಾಹದ ಚಿಲುಮೆಯಾಗಿಸಿತು, ನಿರಂತರ ಸೇವೆಗೆ ತೊಡಗಿಸಿತು. ಊರಲ್ಲಿಯ ಸೇವೆ ನೋಡಿ ತಾಲ್ಲೂಕಾ ಕ್ಷೇತ್ರವೂ ಅವರನ್ನು ಕೈ ಮಾಡಿ ಕರೆಯಿತು. ಸಂಕೇಶ್ವರದ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆಯ ನಿರ್ದೇಶಕರಾಗಿ, ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ ಅಹರ್ನಿಶಿ ದುಡಿದರು. ಅಪ್ಪಣಗೌಡ ಪಾಟೀಲರ ಬಲಗೈ ಬಂಟರಾಗಿ, ಅವರ ಸೇವಾವಲಯವನ್ನು ಸಮರ್ಥವಾಗಿ ಮುನ್ನಡೆಸಿದರು. ಅಲ್ಲಿಂದ ಜಿಲ್ಲಾ ಕೇಂದ್ರಕ್ಕೆ ಅವರ ಸೇವೆ ವಿಸ್ತಾರವಾಯಿತು. ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ನಿರ್ದೇಶಕರಾದರು. ಕೆ.ಎಲ್.ಇ. ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದರು. ಆ ವೇಳೆಗಾಗಲೇ ರಾಜ್ಯ ರಾಜಕಾರಣದಲ್ಲಿಯೂ ಮಹತ್ವದ ವ್ಯಕ್ತಿಯಾಗಿ ಬೆಳೆದಿದ್ದರು. ವಿಧಾನ ಪರಿಷತ್ ಸದಸ್ಯರಾಗಿ ಒಂದು ಅವಧಿ ಪೂರೈಸಿದರು. ಆಮೇಲೆ ಶಾಸಕರಾಗಿ ವಿಧಾನ ಸಭೆ ಪ್ರವೇಶಿಸಿದರು. ಹೀಗೆ ವಿಶ್ವನಾಥ ಕತ್ತಿ ಅವರು ಹಳ್ಳಿಯಿಂದ ರಾಜ್ಯದ ರಾಜಧಾನಿಯವರೆಗೆ ಒಂದೊಂದೇ ಮೆಟ್ಟಲನ್ನು ಏರುತ್ತ ಬೆಳೆದರು. ಅದಕ್ಕೆ ಅವರ ಸ್ನೇಹ, ಸೇವೆ, ಸಹಕಾರ ಗುಣಗಳೇ ಕಾರಣ. ಈ ಗುಣಗಳು ಅವರ ಸ್ವಯಾರ್ಜಿತ ಸಂಪಾದನೆಗಳಾಗಿದ್ದವಲ್ಲದೆ ಮನೆತನದ ಹಿರಿಯರಿಂದ ಬಂದ ಬಳುವಳಿಗಳೂ ಆಗಿದ್ದವು. ಅವರ ವ್ಯಕ್ತಿತ್ವದ ಹಿರಿತನದಲ್ಲಿ ಮನೆತನದ ಪಾತ್ರವೂ ಅಗಾಧವಾಗಿದೆ.

ವಿಶ್ವನಾಥ ಕತ್ತಿ ಅವರ ಅಜ್ಜ 'ದಾನಶೂರ' ಎಂದು ಸುತ್ತಮುತ್ತಲಿನ ಊರುಗಳಲ್ಲಿ ಹೆಸರಾಗಿದ್ದರು. ಅವರ ಹೆಸರು ಸಾತಪ್ಪ ಚೆನ್ನಮಲ್ಲಪ್ಪ ಕತ್ತಿ. ಸುಮಾರು ನಾಲ್ಕು ನೂರು ಎಕರೆ ಜಮೀನ ಒಡೆಯರು. ಬರುವ ಆದಾಯದಲ್ಲಿ ಸುಖವಾಗಿ ಇರಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ದುಡಿಯುವ ಜನರ, ಕೂಲಿಕಾರರ ಬಗೆಗೆ ಅವರಿಗೆ ಎಲ್ಲಿಲ್ಲದ ಪ್ರೀತಿ, ಅಂತಃಕರಣ. 'ಅವರು ದುಡಿದರೆ ತಾನೆ ಮನೆಯಲ್ಲಿ ಕಾಳು ಕಡಿ ತುಂಬುವುದು' ಎಂದು ಬಡವರ ಯೋಗಕ್ಷೇಮದ ಬಗೆಗೆ ಸದಾ ಹಂಬಲಿಸುತ್ತಿದ್ದರು. ಬಡವರ ಮದುವೆ, ಕಷ್ಟ-ಸುಖಗಳಲ್ಲಿ ತಪ್ಪದೆ ಹಾಜರಾಗುತ್ತಿದ್ದರು. ಮನೆಯೊಳಗಿನ ದವಸ ಧಾನ್ಯಗಳನ್ನು ಕೊಟ್ಟು ಸಹಕರಿಸುತ್ತಿದ್ದರು.ಬಡವರ ಮನೆಯಲ್ಲಿ

ಹೆರಿಗೆ ಆದ ಸುದ್ದಿ ತಿಳಿದರೆ ಸಾಕು, ಸ್ವತಃ ಬೆಲ್ಲ ಬೇಳೆ, ಕೊಬ್ಬರಿ ಹಿಡಿದುಕೊಂಡು ಹೋಗಿ ಪ್ರೀತಿಯಿಂದ ಮಾತನಾಡಿಸಿ ಕೊಟ್ಟು ಬರುತ್ತಿದ್ದರು. ಅಜ್ಜ ಅಜ್ಜಿಯ ಈ ಔದಾರ್ಯದ ಗುಣಗಳನ್ನು ಮೊಮ್ಮಗಳಾದ ಮೃಣಾಲಿನಿತಾಯಿ ಅಂಗಡಿ ನೆನಸಿಕೊಳ್ಳುತ್ತಾರೆ (ವಿಶ್ವನಾಥ ಕತ್ತಿಯವರ ಸಹೋದರಿ). 'ಹೊಲದ ಉತ್ಪನ್ನ ತನಗೇ ಸಂಬಂಧಿಸಿದ್ದು ಎಂದು ನಮ್ಮಜ್ಜ ತಿಳಿದಿರಲಿಲ್ಲ. ಊರೊಳಗಿನ ಕಡುಬಡವರಿಗೆ, ದೀನ ದುರ್ಬಲರಿಗೆ ಅದನ್ನು ಹಂಚಿ ಸಂತೋಷ ಪಡುತ್ತಿದ್ದ. ಅವನಿಗೆ ತಕ್ಕ ಸಂಗಾತಿಯಾಗಿದ್ದಳು ನಮ್ಮ ಅಜ್ಜಿ. ಅವಳು ಪೂಜೆಗೆ ಕುಳಿತಾಗ, ಅವಳ ಅಂಗೈಯೊಳಗಿನ ಲಿಂಗವನ್ನು ನಾವು ಕಿತ್ತುಕೊಂಡು ಆಟವಾಡುತ್ತಿದ್ದೆವು. ಅಷ್ಟಾದರೂ ಮೊಮ್ಮಕ್ಕಳಿಗೆ ಬೈದವಳಲ್ಲ ಅವಳು, ತುಂಬ ಮುಗ್ಧಳು' [1]

ಸಾತಪ್ಪ ಅಜ್ಜ ಕೊಡುಗೈ ದೊರೆ ಆಗಿದ್ದರು, ಅಷ್ಟೇ ಅಲ್ಲ. ಜನರಿಗೆ ಕಷ್ಟಪಟ್ಟು ದುಡಿಯುವುದನ್ನೂ ಹೇಳುತ್ತಿದ್ದರು. 'ದುಡಿಮೆಯೇ ದುಡ್ಡಿನ ತಾಯಿ' ಎಂಬ ಆದರ್ಶವನ್ನೂ ಅವರು ಬೋಧಿಸುತ್ತಿದ್ದರು. ಕಷ್ಟದಲ್ಲಿ ಒಬ್ಬರಿಗೊಬ್ಬರು ನೆರವಾಗಬೇಕು. ನೆರವನ್ನು ಪಡೆದವರು ಸಕಾಲದಲ್ಲಿ ಮರಳಿಸಬೇಕೆಂಬುದೂ ಅವರ ಧೋರಣೆಯಾಗಿತ್ತು. ಸಾಲ ತೆಗೆದುಕೊಂಡು ಮಾತಿನಂತೆ ಮರಳಿಸದಿದ್ದರೆ ಅವರಿಗೆ ಮತ್ತೊಮ್ಮೆ ಸಾಲ ಕೊಡುತ್ತಿರಲಿಲ್ಲ. ಸಾಲವು ಮನುಷ್ಯನನ್ನು ಮೈಗಳ್ಳನನ್ನಾಗಿ ಮಾಡಬಾರದೆಂದು ಹೇಳುತ್ತಿದ್ದರಂತೆ. ಅವರ ಸಾಲದ ನೀತಿಯಲ್ಲಿ ಸಹಕಾರದ ಪ್ರೀತಿ ಇತ್ತು; 'ಪ್ರತಿಯೊಬ್ಬರೂ ಎಲ್ಲರಿಗಾಗಿ, ಎಲ್ಲರೂ ಪ್ರತಿಯೊಬ್ಬರಿಗಾಗಿ' ಎಂಬ ಧೋರಣೆ ಇತ್ತು; 'ಪರಸ್ಪರ ಸಹಾಯದ ಮೂಲಕ ಸ್ವಸಹಾಯ'-ಎಂಬ ಜೀವನಪಾಠವಿತ್ತು. ಇಂಥ ಆದರ್ಶಜೀವಿಯ ಮಗನೇ ಮಲ್ಲಪ್ಪ,- ವಿಶ್ವನಾಥ ಕತ್ತಿಯವರ ತಂದೆ. ಸಾತಪ್ಪನವರಿಗೆ ಮೂವರು ಹೆಣ್ಣುಮಕ್ಕಳು-ಪಾರ್ವತವ್ವ, ಸಿದ್ಲಿಂಗವ್ವ ಮತ್ತು ಪದ್ಮಾವತಿ. ಪಾರ್ವತವ್ವ ಮುರಗೋಡದ ಶೆಟ್ಟರ ಮನೆಗೆ, ಸಿದ್ಲಿಂಗವ್ವ ಅಥಣಿಯ ಮಹಾಜನರ ಮನೆಗೆ, ಪದ್ಮಾವತಿ ಸುಣಧೋಳಿಯ ಅಂಗಡಿಯವರ ಮನೆಗೆ ಸೊಸೆಯಂದಿರಾಗಿ ಹೋದರು. ಮಲ್ಲಪ್ಪ ಸಾಹುಕಾರರಲ್ಲಿ ತಂದೆಯ ಉದಾರತನ, ತಾಯಿಯ ಭಕ್ತಿಭಾವಗಳು ಬಳುವಳಿಯಾಗಿ ಬಂದಿದ್ದವು. ಇವರದು ತುಂಬ ಕಟ್ಟುನಿಟ್ಟಾದ ದಿನಚರಿ. ಗಾಂಧೀಜಿಯವರ ಸ್ವಾತಂತ್ರ್ಯ ಚಳವಳಿ, ಗ್ರಾಮಸ್ವರಾಜ್ಯ, ಸ್ವದೇಶಿ ಚಳವಳಿಗಳು ಕರ್ನಾಟಕದಲ್ಲಿ ಜೋರಾಗಿ ನಡೆದಿದ್ದ ಕಾಲವದು. ಬೆಳಗಾವಿ ಜಿಲ್ಲೆಯ ಹುಕ್ಕೇರಿ ಪ್ರದೇಶವು ಸ್ವಾತಂತ್ರ್ಯ ಚಳವಳಿಯ ಕೇಂದ್ರವಾಗಿತ್ತು. ಅದರ ಪ್ರಭಾವದಲ್ಲಿ ಮಲ್ಲಪ್ಪ ಸಾಹುಕಾರರೂ ಚಳವಳಿಯತ್ತ ಆಕರ್ಷಿತರಾದರು.

1942 ರ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಚಳವಳಿ ಕಾಲಕ್ಕೆ ಮಲ್ಲಪ್ಪ ಸಾಹುಕಾರರು ಭೂಗತ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ಆ ಕಾಲದಲ್ಲಿ ಸಂಕೇಶ್ವರದ ಎಂ.ಪಿ.ಪಾಟೀಲ, ಅಪ್ಪಾಗೌಡ ಪಾಟೀಲ ಮುಂತಾದವರು ಚಳವಳಿಗೆ ರೂಪರೇಷೆ ಕೊಡುತ್ತಿದ್ದರು. ಜನರು ಮನೆ ಮಾರು ಬಿಟ್ಟು ಹೋರಾಟಕ್ಕೆ ಧುಮುಕುತ್ತಿದ್ದರು. ಆಗ ಹೋರಾಟಗಾರರ ಮನೆ ಮಂದಿಯ ಹೊಟ್ಟೆ ಬಟ್ಟೆ ನೋಡಿಕೊಳ್ಳುವ ಹೊಣೆಯೂ ಊರ ಹಿರಿಯರ ಮೇಲಿತ್ತು. ಇಂತಹ ಪ್ರಸಂಗಗಳಲ್ಲಿ ಮಲ್ಲಪ್ಪನವರು ಜನರ ನೆರವಿಗೆ ಧಾವಿಸುತ್ತಿದ್ದರು. ಮನೆಯಲ್ಲಿಯ ದವಸ ಧಾನ್ಯಗಳನ್ನು ಹೋರಾಟಗಾರರ ಮನೆಗಳಿಗೆ ಸದ್ದಿಲ್ಲದೆ ಸಾಗಿಸುತ್ತಿದ್ದರು. ಇವರ ಚಟುವಟಿಕೆಗಳನ್ನು ಗಮನಿಸಿದ ಸರಕಾರವು 'ಚಲೇಜಾವ್ ಚಳವಳಿಯ ಪ್ರಚೋದಕ'ರೆಂದು ಬಂಧಿಸಿ ಸೆರೆಮನೆಗೆ ಕಳಿಸಿತು. ಆಗ ಮನೆಯೊಡತಿ ಅನಸೂಯಾತಾಯಿ ಅವರು ಎದೆಗುಂದಲಿಲ್ಲ. ಪತಿಯ ಸೇವೆಯನ್ನು ನಿಷ್ಠೆಯಿಂದ ಮುನ್ನಡೆಸಿದರು. ತುಂಬಿದ ಮನೆ, ಆಳು-ಕಾಳು ಎಲ್ಲವನ್ನು ಮನೆಯವರ ಮನದಿಂಗಿತದಂತೆ ಸುಸೂತ್ರವಾಗಿ ಸಾಗಿಸಿದರು. ಸೆರೆಮನೆಯಿಂದ ಹೊರ ಬಂದ ಮೇಲೆಯೂ ಸಾಹುಕಾರರ ದೇಶಸೇವೆ ಸಾಂಗವಾಗಿ ನಡೆಯಿತು.

ಸಾಹುಕಾರರ ಸೇವೆಯ ಮತ್ತೊಂದು ಕ್ಷೇತ್ರವೆಂದರೆ ಸಹಕಾರ. ಊರಲ್ಲಿ 1905ರಲ್ಲಿಯೇ ಆರಂಭವಾಗಿದ್ದ 'ಬೆಲ್ಲದ ಬಾಗೇವಾಡಿ ರೂರಲ್ ಕೋ-ಆಪ್ ಕ್ರೆಡಿಟ್ ಸೊಸಾಯಿಟಿ'ಯ ಹಿತೈಷಿಯಾಗಿ ಅದರ ಏಳಿಗೆಗಾಗಿಯೂ ದುಡಿದರು. ಈ ಬ್ಯಾಂಕು 'ಅಗ್ರಿ ಕೋ ಆಪ್ ಕ್ರೆಡಿಟ್ ಸೊಸಾಯಿಟಿ'ಯಾಗಿ ಬೆಳೆಯುತ್ತಿದ್ದ ಹಂತದಲ್ಲಿ ಅಂದರೆ 1926 ರಿಂದ 1943 ರ ವರೆಗೆ, 18 ವರ್ಷಗಳ ಕಾಲ ಸಂಘದ ಚೇರಮನ್‌ರಾಗಿ ಸೇವೆ ಸಲ್ಲಿಸಿದರು. ಇವರ ಅವಧಿಯಲ್ಲಿ ಬರಗಾಲ ತಲೆದೋರಿತು. ಆಗ ಇವರು ಶ್ರೀಮಂತರಿಂದ ದವಸ ಧಾನ್ಯ ಸಂಗ್ರಹಿಸಿ ಬಡಜನರಿಗೆ ಹಂಚಿದರು. ಹಸಿವಿನಿಂದ ಬಡಜನರು ಪಾರಾಗಲು ತಮ್ಮೂರ ಬಡಜನರ ಸಲುವಾಗಿ ಹೊಸ ಪಡಿತರ ಯೋಜನೆಯನ್ನು ಆಚರಣೆಗೆ ತಂದರು.

ಮಲ್ಲಪ್ಪ-ಅನಸೂಯಾ ದಂಪತಿಗೆ ಪ್ರೇಮಾ, ಮುರಿಗೆಪ್ಪ, ಮೃಣಾಲಿನಿ, ವಿಶ್ವನಾಥ, ಸುಮಂಗಲಾ- ಎಂದು ಐದು ಜನ ಮಕ್ಕಳು. ಈ ಚರಿತ್ರೆಯ ನಾಯಕ ವಿಶ್ವನಾಥ 28 ಸೆಪ್ಟಂಬರ್ 1937 ರಲ್ಲಿ ಜನಿಸಿದರು. ಇವರ ಆರಂಭದ ಶಿಕ್ಷಣ ಬೆಲ್ಲದ ಬಾಗೇವಾಡಿಯಲ್ಲಿ ನಡೆಯಿತು.

ಮನೆ ಮಂದಿ ಪ್ರೀತಿಯಿಂದ 'ಇಸು' (ವಿಶ್ವನಾಥ ಹೆಸರಿನ ತದ್ಭವ ರೂಪ) ಎಂದೇ ಕರೆಯುತ್ತಿದ್ದರು. ಗೆಳೆಯರಿಗೂ ಇದೇ ಪ್ರಿಯವಾದ ಹೆಸರು. ಶಾಲೆಯಲ್ಲಿ ಅಭ್ಯಾಸಕ್ಕಿಂತಲೂ ಆಟದಲ್ಲಿಯೇ ಒಂದು ಹೆಜ್ಜೆ ಮುಂದು. ಕ್ರಿಕೆಟ್ ಎಂದರೆ

ಎಲ್ಲಿಲ್ಲದ ಪ್ರೀತಿ. ಇವರ ಬೆನ್ನಿಗೆ ಗೆಳೆಯರ ಗುಂಪು ಯಾವಾಗಲೂ ಸಿದ್ಧವಾಗಿರುತ್ತಿತ್ತು. ಇವರ ಸಾರಥ್ಯದಲ್ಲಿ ಆಟ-ಪಾಠಗಳ ಯಾತ್ರೆ ಮುಂದುವರಿಯುತ್ತಿತ್ತು. ತಾಯಿ-ತಂದೆಯರ ಕಣ್ಣರಿಕೆಯಲ್ಲಿ, ಅಣ್ಣನ ಸುಪರ್ದಿನಲ್ಲಿ ಶಾಲೆಯ ದಿನಚರಿ ತಪ್ಪುತ್ತಿರಲಿಲ್ಲ. ಶಾಲೆಯಲ್ಲಿ ಕುಲಕರ್ಣಿ ಎನ್ನುವವರು ಇವರ ಮೆಚ್ಚಿನ ಗುರುಗಳಾಗಿದ್ದರು. ಇವರು ಇಂಗ್ಲೀಷ್ ಪಾಠಗಳನ್ನು ಸ್ವಾರಸ್ಯಕರವಾಗಿ ಕಲಿಸುತ್ತಿದ್ದರು. ಇವರ ಪಾಠಗಳೆಂದರೆ ವಿಶ್ವನಾಥರಿಗೆ ತುಂಬ ಆಸಕ್ತಿ, ತಪ್ಪಿಸುತ್ತಿರಲಿಲ್ಲ. ಗುರುಗಳೂ ಇವರನ್ನು ತುಂಬ ಹಚ್ಚಿಕೊಂಡಿದ್ದರು.

ಶಾಲೆಗೆ ರಜೆ ಇದ್ದಾಗ ಇವರ ಆಟದ ಸಂಭ್ರಮ ನೋಡುವಂತಿರುತ್ತಿತ್ತು. ಭಾವಿಯಲ್ಲಿ ಈಜುವುದು, ಊರು ಸುತ್ತುವುದು, ಬಯಲಿನಲ್ಲಿ ಕ್ರಿಕೆಟ್, ಮಾವಿನ ತೋಪಿನಲ್ಲಿ ಮಂಗನಾಟ ಇತ್ಯಾದಿ ಆಟಗಳು ತಪ್ಪದೆ ನಡೆಯುತ್ತಿದ್ದವು. ಇವರ ಮೋಜಿನ ಮಾತುಗಾರಿಕೆ ಗೆಳೆಯರಿಗೆಲ್ಲ ಅಪ್ಯಾಯಮಾನ. ಇವರ ಸಹವಾಸದಲ್ಲಿ ಹೊತ್ತು ಹೋದದ್ದೇ ಅವರಿಗೆ ತಿಳಿಯುತ್ತಿರಲಿಲ್ಲ. ಗೆಳೆಯರಿಗೆ ಉಣಿಸು, ತಿನಿಸು ಕೂಡ ಈ ಸಣ್ಣ ಸಾಹುಕಾರರಿಂದಲೇ ಸರಬರಾಜು ಆಗುತ್ತಿತ್ತು. ಬಾಲ್ಯದ ದಿನಚರಿ ಉಮೇದಿನಿಂದ ಸಾಗುತ್ತಿರುವಾಗಲೇ ತಂದೆ ತೀರಿಕೊಂಡರು. ಅಣ್ಣ ಮುರಿಗೆಪ್ಪ ಮನೆಯ ಹೊಣೆ ಹೊತ್ತರು. ಅವರ ಶಾಲೆ ಅರ್ಧಕ್ಕೇ ನಿಂತಿತು. ತಮ್ಮನಾದರೂ ಹೆಚ್ಚು ಕಲಿಯಲೆಂದು ಅವರು ವಿಶೇಷ ಕಾಳಜಿ ವಹಿಸಿದರು. ಒಂದೆರಡು ವರುಷ ಅಥಣಿಯ ಬೀಗರ ಮನೆಯಲ್ಲಿದ್ದು ವಿಶ್ವನಾಥ ಕತ್ತಿಯವರ ಓದು ಮುಂದುವರಿಯಿತು. ಅಲ್ಲಿಂದ ಬೆಳಗಾವಿಗೆ ಪ್ರಯಾಣ. ಬೆಳಗಾವಿ ಇವರ ಆಸಕ್ತಿಗೆ ವಿಶಾಲವಾದ ಅಂಗಳವಾಗಿ ಪರಿಣಮಿಸಿತು.

ಅಣ್ಣನ ಬಯಕೆ, ಇಂಗ್ಲೀಷ್ ಕಲಿಯಬೇಕೆಂಬ ಆಶೆಯು ವಿಶ್ವನಾಥರನ್ನು ಬೆಳಗಾವಿಗೆ ಕರೆದುಕೊಂಡು ಹೋಯಿತು. ಬೆಳಗಾವಿಯ ಸೇಂಟ್‌ಪಾಲ್ ಇಂಗ್ಲಿಷ್ ಶಾಲೆಯಲ್ಲಿ ಅವರ ಇಂಗ್ಲಿಷ್ ವಿದ್ಯಾರ್ಥಿ ಜೀವನ ಪ್ರಾರಂಭವಾಯಿತು. ಟಿಳಕವಾಡಿಯಲ್ಲಿ ಸೋದರತ್ತೆ ಪದ್ಮಾವತಿದೇವಿ ಅಂಗಡಿಯವರ ಮನೆ ಇತ್ತು. ಸೋದರಮಾವ ಷಣ್ಮುಖಪ್ಪ ಅಂಗಡಿ ಆ ಕಾಲದಲ್ಲಿ ದೊಡ್ಡ ರಾಜಕೀಯ ಧುರೀಣರಾಗಿದ್ದರು. ಇವರ ಮನೆಯಲ್ಲಿದ್ದು ವಿಶ್ವನಾಥ ದಿನಾಲೂ ಸೈಕಲ್ ಸವಾರರಾಗಿ ಸ್ಕೂಲಿಗೆ ಹೋಗಿ ಬರುತ್ತಿದ್ದರು.

ವಿಶ್ವನಾಥ ಕತ್ತಿಯವರ ವ್ಯಕ್ತಿತ್ವ ರೂಪಿಸಿದ ಸ್ಥಳಗಳಲ್ಲಿ ಸೋದರತ್ತೆಯ ಮನೆಯೂ ಒಂದು. ಸೋದರತ್ತೆ ಪದ್ಮಾವತಿಯವರ ಪತಿ ರಾವಬಹಾದ್ದೂರ ಷಣ್ಮುಖಪ್ಪ ಅಂಗಡಿಯವರು ಆ ಕಾಲದ ದೊಡ್ಡ ರಾಜಕೀಯ ಧುರೀಣರಾಗಿದ್ದರು.

ಷಣ್ಮುಖಪ್ಪ ಅವರು 1920ರಲ್ಲಿಯೇ ರಾಜಕೀಯ ರಂಗ ಪ್ರವೇಶಿಸಿ, ಬ್ರಾಹ್ಮಣೇತರ ಸಮುದಾಯದ ನಾಯಕರಾಗಿದ್ದರು. ಮುಂಬಯಿ ವಿಧಾನ ಪರಿಷತ್ತಿನ ಸದಸ್ಯರಾಗಿದ್ದರು. ಸಾರ್ವಜನಿಕ ಜೀವನದಲ್ಲಿ ಕೈ ಬಾಯಿ ಪರಿಶುದ್ಧವಾಗಿಟ್ಟುಕೊಂಡು ಜನರ ಏಳ್ಗೆಗಾಗಿ ಹಗಲಿರುಳು ಶ್ರಮಿಸುತ್ತಿದ್ದರು. ಷಣ್ಮುಖಪ್ಪನವರಿಗೆ ಅವರ ಹೆಂಡತಿ ಪದ್ಮಾವತಿಯವರು ಬಹುದೊಡ್ಡ ಶಕ್ತಿಯಾಗಿದ್ದರು. ಪಾಟೀಲ ಪುಟ್ಟಪ್ಪನವರು ಹೇಳುವಂತೆ 'ಪದ್ಮಾವತಿಯವರು ಶಾಲೆಯಲ್ಲಿ ಓದಿದುದು ಅತ್ಯಲ್ಪವಾಗಿದ್ದರೂ, ಅವರು ತಮ್ಮನ್ನು ಬಹುದೊಡ್ಡ ರೀತಿಯಿಂದ ಬೆಳೆಸಿಕೊಂಡಿದ್ದರು. ಪ್ರಾಥಮಿಕ ಶಾಲೆಯಲ್ಲಿ ಆರನೆಯ ವರ್ಗದವರೆಗೆ ಓದಿದುದೇನೂ ದೊಡ್ಡ ಓದಲ್ಲ. ಕನ್ನಡದಲ್ಲಿ ಅವರು ಮಾಡುತ್ತಿದ್ದ ಭಾಷಣಗಳನ್ನು ಕೇಳಿದವರೆಲ್ಲರೂ ಭಾರಿ ಸೋಜಿಗವನ್ನು ವ್ಯಕ್ತಪಡಿಸುತ್ತಿದ್ದರು. ಎಂ.ಎ., ಪಿಎಚ್.ಡಿ. ಆಗಿ ವಿಶ್ವವಿದ್ಯಾಲಯದಲ್ಲಿ ಓದಿರುವ ಯಾವ ಮಹಿಳೆಯೂ ಅವರಂತೆ ಅಸ್ಖಲಿತವಾಗಿ ಮಾತನಾಡುತ್ತಿರಲಿಲ್ಲ..... ಮುಂಬಯಿ ವಿಧಾನಸಭೆಯ ಡೆಪ್ಯೂಟಿ ಸ್ಪೀಕರ್ ಆಗಿದ್ದ ಷಣ್ಮುಖಪ್ಪ ಅಂಗಡಿಯವರು ಪದ್ಮಾವತಿಯವರೊಂದಿಗೆ ಶಿರಹಟ್ಟಿಗೆ ಹೋಗಿದ್ದಾಗ, ಅಲ್ಲಿಯ ಸಭೆಯಲ್ಲಿ "ನೋಡ್ರಿ, ನಾನು ಡೆಪ್ಯೂಟಿ ಸ್ಪೀಕರ್, ನನ್ನ ಹೆಂಡತಿ ನಿಜವಾದ ಸ್ಪೀಕರ್" ಎಂದು ವಿನೋದದಿಂದ ಹೇಳಿದ ಮಾತು ಎಲ್ಲರನ್ನೂ ನಗೆಗಡಲಲ್ಲಿ ತೇಲಿಸಿದ್ದಿತು."[2] ಪದ್ಮಾವತಿಯವರು ಸರ್ವಾರ್ಥದಲ್ಲಿಯೂ ಅಂಗಡಿಯವರ ಮಾರ್ಗದರ್ಶಿಗಳೂ, ಸ್ನೇಹಿತರೂ, ಅವರ ತತ್ವಜ್ಞಾನಿಯೂ ಆಗಿದ್ದರು. ಇವರು ವಿಶ್ವನಾಥ ಕತ್ತಿಯವರ ಸೋದರತ್ತೆ. ವಿಶ್ವನಾಥ ಕತ್ತಿಯವರ ರಾಜಕೀಯ ಜೀವನ ರೂಪುಗೊಳ್ಳುವುದಕ್ಕೆ ಇಂಥ ಬೀಗರ ಸಹವಾಸವೂ ಮುಖ್ಯ ಪ್ರೇರಣೆಯಾಗಿದ್ದಿತೆಂದು ಮಾನ್ಯ ಸಂಸದರಾದ ಶ್ರೀ ರಮೇಶ ಕತ್ತಿಯವರು ಬೆಳಗಾವಿ ಲಿಂಗರಾಜ ಮಹಾವಿದ್ಯಾಲಯದಲ್ಲಿ ದಿನಾಂಕ 27 ಆಗಸ್ಟ್ 2009 ರಂದು ಜರುಗಿದ ಷಣ್ಮುಖಪ್ಪ ಅಂಗಡಿಯವರ "ನನ್ನ ಜೀವನ ಚರಿತ್ರೆ" ಆತ್ಮಚರಿತ್ರೆಯ ಕನ್ನಡ ಮತ್ತು ಇಂಗ್ಲೀಷ ಆವೃತ್ತಿಗಳ ಬಿಡುಗಡೆ ಸಮಾರಂಭದಲ್ಲಿ ಹೇಳಿದ್ದುಂಟು. ಬೆಲ್ಲದ ಬಾಗೇವಾಡಿಯ ಕತ್ತಿ ಮನೆತನಕ್ಕೂ, ಸುಣಧೋಳಿಯ ಅಂಗಡಿ ಮನೆತನಕ್ಕೂ ತಲೆತಲಾಂತರದ ನೆಂಟಸ್ತನ. ಕತ್ತಿಯವರು ಶ್ರಮಜೀವಿಗಳು, ಅಂಗಡಿಯವರು ಬುದ್ಧಿಜೀವಿಗಳು. ಅಂಗಡಿಯವರ ಸಲಹೆ-ಸೂಚನೆಗಳನ್ನು ಶ್ರದ್ಧೆಯಿಂದ ಪರಿಪಾಲಿಸಿ ಕತ್ತಿಯವರು ಸಾರ್ವಜನಿಕ ಜೀವನದಲ್ಲಿ ಯಶಸ್ವಿಯಾದ ಬಗೆಯನ್ನು ಮಾನ್ಯ ಸಂಸದರಾದ ಶ್ರೀ ರಮೇಶ ಕತ್ತಿಯವರು ಕಥೆ ಮಾಡಿ ಸ್ವಾರಸ್ಯಕರವಾಗಿ ವಿವರಿಸುತ್ತಾರೆ. ವಿಶ್ವನಾಥ ಕತ್ತಿಯವರು ಸೋದರತ್ತೆಯ ಮನೆಯಲ್ಲಿದ್ದು ಓದಿದ ಮತ್ತು ಆ ಮನೆಯಿಂದ ಪಡೆದುಕೊಂಡ ಸಂಸ್ಕಾರವು ಅವರ ಭಾವೀ ಜೀವನದಲ್ಲಿ ಅಮೂಲ್ಯ ಬಂಡವಾಳವಾಗಿ ಬಳಕೆಯಾಯಿತೆಂಬುದು ಮರೆಯಲಾಗದು.

ಬೆಲ್ಲದ ಬಾಗೇವಾಡಿ ದಿನಚರಿ ಕೂಡ ಚಟುವಟಿಕೆಶೀಲವಾಗಿತ್ತು. ಚೇತೋಹಾರಿಯಾಗಿತ್ತು. ಇವರ ಸ್ನೇಹ, ಔದಾರ್ಯ, ಹಾಸ್ಯ ಸ್ವಭಾವಕ್ಕೆ ಗೆಳೆಯರು ಬಲು ಬೇಗನೆ ಮುಗಿಬೀಳುತ್ತಿದ್ದರು. ಇಂಗ್ಲೀಷ ಶಾಲೆಯಲ್ಲಿಯೂ ಗೆಳೆಯರ ಬಳಗ ಕಟ್ಟಿಕೊಂಡು 'ಟೀಂ ಲೀಡರ್' ಆದರು. ಈ 'ಲೀಡರ್'- ನಾಯಕನ ಗುಣ ಅವರಲ್ಲಿ ಸಹಜವಾಗಿಯೇ ಇತ್ತು. 'ಮುದ್ದಾಂ ಆಗಿ ತುಸು ತಡವಾಗಿಯೇ ಕ್ಲಾಸರೂಂ ಪ್ರವೇಶ, ಆಗ ವಿದ್ಯಾರ್ಥಿಗಳೆಲ್ಲ ನೋಡುವುದು, ಶಿಕ್ಷಕರು ಕಾರಣ ಕೇಳುವುದು, ಅದಕ್ಕೆ ಇವರು ವಾಕ್‌ಚಾತುರ್ಯದಿಂದ ಉತ್ತರಿಸುವುದು, ಹೀಗೆ ಕ್ಲಾಸಿನಲ್ಲಿ ಚತುರ ಮಾತಿನಿಂದ ನಕ್ಕುನಗಿಸುವ, ಎದ್ದು ಕಾಣುವ ವಿದ್ಯಾರ್ಥಿಯಾಗಿದ್ದರು ವಿಶ್ವನಾಥ ಸಾಹುಕಾರರು'[3] ಎಂದು ಅವರ ಸಹಪಾಠಿಗಳು ನೆನೆಪಿಸುತ್ತಾರೆ.

ಸ್ಕೂಲಿನಿಂದ ಮರಳಿದ ಮೇಲೆ ಸಂಜೆ ದಿನಾಲೂ ಕ್ರಿಕೆಟ್ ಆಡುತ್ತಿದ್ದರು. ಅದಕ್ಕಾಗಿ ಬ್ಯಾಟ್, ಬಾಲ್, ಇತರ ಸಾಮಗ್ರಿಯೆಲ್ಲ ಸ್ವಂತ ಖರ್ಚಿನಲ್ಲಿಯೇ ಖರೀದಿಸುತ್ತಿದ್ದರು. ಎರಡು-ಮೂರು ಜೊತೆ ಆಟದ ಸಾಮಗ್ರಿ ಇದ್ದವು. ಆಡಲು ಗೆಳೆಯರ ಗುಂಪು ಕಟ್ಟಿದ್ದರು. ಟಿಳಕವಾಡಿಯ ವ್ಯಾಕ್ಸಿನ್ ಡಿಪೋದ ಪಕ್ಕದ ಬಯಲು ಇವರಿಗೆ ಕ್ರೀಡಾಂಗಣವಾಗಿತ್ತು. ಆಟದ ನಂತರ ಗೆಳೆಯರಿಗೆ ಚಹಾ ಕುಡಿಸುತ್ತಿದ್ದರು. ಗೆಳೆಯರು ಬಡವರಿದ್ದರೆ, ಅವರ ಬಗೆಗೆ ವಿಶೇಷ ಕಾಳಜಿ. ಅವರಿಗೆ ಅಗತ್ಯವಿದ್ದಾಗ ಒಂದಿಷ್ಟು ಹಣಕಾಸಿನ ನೆರವೂ ಮಾಡುತ್ತಿದ್ದರು. ಸೇಂಟ್‌ಪಾಲ್ ಸ್ಕೂಲಿನಲ್ಲಿ ವಿದ್ಯಾರ್ಥಿಗಳ ಪ್ರತಿನಿಧಿಯಾಗಿಯೂ ಆಯ್ಕೆಯಾಗಿದ್ದರು. ಪಠ್ಯೇತರ ಚಟುವಟಿಕೆಗಳಲ್ಲಿ ಮುಂದಿದ್ದಂತೆ ಪಠ್ಯದಲ್ಲಿಯೂ ಮುಂದಿದ್ದರು. ಇಂಗ್ಲೀಷ್ ವಿಷಯದಲ್ಲಿ ಹೆಚ್ಚು ಅಂಕಗಳಿಸುತ್ತಿದ್ದರು. ಸ್ಕೂಲಿನಲ್ಲಿದ್ದಾಗಲೇ ಕಥೆ, ಕಾದಂಬರಿ ಓದುವ ಹವ್ಯಾಸ ಬೆಳೆಯಿತು. ಬೆಳಗಾವಿಯ ವಿದ್ಯಾರ್ಥಿ ದಿನಚರಿಯು ವಿಶ್ವನಾಥರ ವ್ಯಕ್ತಿತ್ವಕ್ಕೆ ವಿಶೇಷ ಮೆರಗು ತಂದಿತು. ಈ ಬೆಳವಣಿಗೆ ತಿಳಿದು ಅಣ್ಣ-ಅಕ್ಕಂದಿರರಿಗೂ ಖುಷಿಯಾಯಿತು. 'ವಿಶ್ವಾ, ಹೆಚ್ಚಿಗೆ ಓದಲಿ, ನಮ್ಮ ಮನೆಯ ಕೀರ್ತಿ ಬೆಳಗಿಸಲಿ' ಎಂದು ಎಲ್ಲರೂ ಹಾರೈಸುತ್ತಿದ್ದರು. ಈ ಭರದಲ್ಲಿ ವಿಶ್ವನಾಥರ ಅಭ್ಯಾಸ ಮುಂದುವರೆದಿತ್ತು. ಅಷ್ಟರಲ್ಲಿ ಅದೃಷ್ಟ ಕೈಕೊಟ್ಟಿತು. ಮನೆಗೆ ಆಧಾರಸ್ತಂಭವಾಗಿದ್ದ ಅಣ್ಣ ಮುರಿಗೆಪ್ಪ 1957 ಅಕ್ಟೋಬರ್ 13 ರಂದು ಹೃದಯಾಘಾತದಿಂದ ನಿಧನರಾದರು. ಈ ಘಟನೆಯಿಂದ ವಿಶ್ವನಾಥರ ಮೇಲೆ ಆಕಾಶವೇ ಕಳಚಿ ಮೇಲೆ ಬಿದ್ದಂತಾಯಿತು. ಕಲಿಯಬೇಕೆಂಬ ಅದಮ್ಯ ಉತ್ಸಾಹಕ್ಕೆ ತಣ್ಣೀರು ಎರಚಿದಂತಾಯಿತು. ಅಣ್ಣನನ್ನು ಕಳೆದುಕೊಂಡು ಊರಿಗೆ ಮರುಳುವ ಪರಿಸ್ಥಿತಿ ನಿರ್ಮಾಣವಾಯಿತು. ಅಣ್ಣನು ಹೊತ್ತಿದ್ದ ಮನೆತನದ

ಹೊಣೆಗಾರಿಕೆ, ಸಹಕಾರ ಸಂಸ್ಥೆಗಳ ಹೊಣೆಗಾರಿಕೆ ನಿಭಾಯಿಸಲು ಬೆಲ್ಲದ ಬಾಗೇವಾಡಿಯ ಹಾದಿ ಹಿಡಿಯಬೇಕಾಯಿತು. ಆಗ ವಿಶ್ವನಾಥ ಸಾಹುಕಾರರ ವಯಸ್ಸು ಕೇವಲ ಇಪ್ಪತ್ತೊಂದು.

ಬೆಲ್ಲದ ಬಾಗೇವಾಡಿಯಲ್ಲಿ 'ಅರ್ಬನ್ ಕೋ-ಆಪ್ ಬ್ಯಾಂಕ್' ಅಸ್ತಿತ್ವಕ್ಕೆ ಬರಲು ವಿಶ್ವನಾಥ ಸಾಹುಕಾರರ ಅಣ್ಣ ಮುರಿಗೆಪ್ಪನವರು ತುಂಬಾ ಶ್ರಮಪಟ್ಟಿದ್ದರು. ಅದು ಬ್ಯಾಂಕ್ ಆಗುವ ಮೊದಲು 'ಅರ್ಬನ್ ಕೋ ಆಪ್ ಸೊಸಾಯಿಟಿ' ಆಗಿತ್ತು. ಈ ಸಂಸ್ಥೆ ಪ್ರಾರಂಭಿಸಬೇಕು ಎಂಬುದರ ಬಗೆಗಿನ ಮೊದಲ ಸಭೆಯು ಮುರಿಗೆಪ್ಪನವರ ಮನೆಯಲ್ಲಿಯೇ ಜರುಗಿತ್ತು. ಮುರಿಗೆಪ್ಪನವರ ಮಾವಂದಿರಾದ ರಾವಬಹದ್ದೂರ ಷಣ್ಮುಖಪ್ಪ ಅಂಗಡಿಯವರ ನೇತೃತ್ವದಲ್ಲಿ ಸಹಕಾರ ಸಂಗದ ರೂಪರೇಷೆಗಳು ಸಿದ್ಧವಾಗಿದ್ದವು. ಅಂಗಡಿಯವರು ಮುಂಬಯಿ ಸರಕಾರದಲ್ಲಿ ಡೆಪ್ಯೂಟಿ ಸ್ಪೀಕರ ಆಗಿದ್ದರು. ರಾಜಕೀಯ ರಂಗದಲ್ಲಿ ಅವರದು ವರ್ಚಸ್ಸಿನ ವ್ಯಕ್ತಿತ್ವ. ಏಕೀಕರಣ ನಂತರದ ಕರ್ನಾಟಕ ಸರಕಾರದಲ್ಲಿಯೂ ಕೆಲ ಕಾಲ ಸ್ಪೀಕರ್ ಹುದ್ದೆಯಲ್ಲಿದ್ದರು. ಇವರು ಆಗಾಗ ಬೆಲ್ಲದಬಾಗೇವಾಡಿಯ ಬೀಗರ ಮನೆಗೆ ಹೋಗುತ್ತಿದ್ದರು. ಗ್ರಾಮ ಸುಧಾರಣೆ ಕುರಿತು ಸ್ವಾವಲಂಬನೆ, ಸಹಕಾರ, ಅಭಿವೃದ್ಧಿ ಕುರಿತು ಯೋಜನೆಗಳನ್ನು ಹೇಳುತ್ತಿದ್ದರು. ಹೀಗೆ ಅಂಗಡಿಯವರು ಅಂದು ಬಿತ್ತಿದ್ದ ಸಹಕಾರ ಬೀಜವು 'ಅರ್ಬನ್ ಕೋ-ಆಪ್ ಸೊಸಾಯಿಟಿ' ಆಗಿ ಹುಟ್ಟಿಕೊಂಡಿತು. ಸರಕಾರದ ನಿಯಮದ ಪ್ರಕಾರ 16 ಸಾವಿರ ಶೇರು ಬಂಡವಾಳದ ಮೇಲೆ ಸೊಸಾಯಿಟಿ 1944ರಲ್ಲಿ ಕಾರ್ಯ ಪ್ರಾರಂಭಿಸಿತು. 20 ಸಾವಿರ ಶೇರು ಬಂಡವಾಳ ಕೂಡಿಸಿದರೆ ಸೊಸಾಯಿಟಿಯು ಬ್ಯಾಂಕ್ ಆಗಿ ಪರಿವರ್ತನೆಯಾಗುತ್ತಿತ್ತು. ಷಣ್ಮುಖಪ್ಪನವರು ಮುರಿಗೆಪ್ಪನವರ ಮೂಲಕ ನಾಲ್ಕು ಸಾವಿರ ರೂಪಾಯಿ ಕೊಡಿಸಿದರು. 'ಅರ್ಬನ್ ಕೋ-ಆಪ್ ಸೊಸಾಯಿಟಿ'ಯು 'ಅರ್ಬನ್ ಕೋ-ಆಪ್ ಬ್ಯಾಂಕ್' ಆಗಿ ಪರಿವರ್ತನೆಯಾಯಿತು. ಈ ಸಂಸ್ಥೆಯ ಬೆಳವಣಿಗೆಯಲ್ಲಿ ಷಣ್ಮುಖಪ್ಪನವರ ಪ್ರಯತ್ನ ಬಹಳವಿತ್ತು. ಕಾರಣ ಸದಸ್ಯರು ಅವರಿಗೆಲ್ಲ ಸಂಸ್ಥಾಪಕ ಪೋಷಕ ಸ್ಥಾನ ನೀಡಿ ಗೌರವಿಸಿದರು. ಮುರಿಗೆಪ್ಪನವರನ್ನು ಸಂಸ್ಥಾಪಕ ಅಧ್ಯಕ್ಷರನ್ನಾಗಿ ಆರಿಸಿದರು. ಮುರಿಗೆಪ್ಪನವರ ಸೇವಾ ಅವಧಿಯಲ್ಲಿ (1944ರಿಂದ 1957) ಬ್ಯಾಂಕ್ ನಿರೀಕ್ಷೆಗೆ ಮೀರಿ ಬೆಳೆಯಿತು. ಬೆಲ್ಲದ ಬಾಗೇವಾಡಿಯ ಜನರ ಬದುಕಿಗೆ ವರದಾನವಾಗಿ ಪರಿಣಮಿಸಿತು. ಮುರಿಗೆಪ್ಪನವರು ತೀರಿಕೊಳ್ಳಲು ಆ ಸ್ಥಾನ ಯಾರು ತುಂಬುವರೆಂಬ ಜಿಜ್ಞಾಸೆ ಆಡಳಿತ ಮಂಡಳಿಯಲ್ಲಿ ಸುರುವಾಗಿತ್ತು. 1957-58 ರಲ್ಲಿ ಜರುಗಿದ ಬ್ಯಾಂಕಿನ ಸರ್ವಸಾಧಾರಣ ಸಭೆಯಲ್ಲಿ ಆ ಸ್ಥಾನವನ್ನು ತುಂಬುವ ಸಮರ್ಥ ವ್ಯಕ್ತಿ ಎಂದರೆ, ವಿಶ್ವನಾಥ ಕತ್ತಿ ಎಂದು ಸರ್ವಾನುಮತದ

ನಿರ್ಣಯ ಪ್ರಕಟವಾಯಿತು. ಆಗ ವಿಶ್ವನಾಥ ಸಾಹುಕಾರರಿಗೆ 21ರ ಪ್ರಾಯ. ಅದೇ ತಾನೆ ಮನೆತನದ ವ್ಯವಹಾರ ನೋಡಿಕೊಳ್ಳಲು ಅವರು ತುಂಬ ಪ್ರಯತ್ನ ಪಡುತ್ತಿದ್ದರು. ಅಜ್ಜಿ, ಅವ್ವ ಮತ್ತು ಹಿತೈಷಿಗಳ ನೆರವಿನಿಂದ, ಸ್ವಂತ ಬುದ್ಧಿಶಕ್ತಿಯಿಂದ ವಯಸ್ಸಿಗೂ ಮೀರಿದ ಭಾರ ಹೊರಲು ಕಸರತ್ತು ನಡೆಸಿದ್ದರು. ಇಂಥ ಹೊತ್ತಿನಲ್ಲಿಯೇ ಅನಿರೀಕ್ಷಿತವಾಗಿ ಒದಗಿಬಂದ ಅರ್ಬನ್ ಕೋ-ಆಪ್ ಬ್ಯಾಂಕಿನ ಅಧ್ಯಕ್ಷಸ್ಥಾನವು ಅವರನ್ನು ಸ್ವಲ್ಪ ದಿಗಿಲುಗೊಳಿಸಿತು. ಆದರೆ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಊರ ಹಿರಿಯರ ಆಶೀರ್ವಾದವೆಂದು ಅದನ್ನೂ ಶ್ರದ್ಧೆಯಿಂದ ಎತ್ತಿಕೊಂಡರು. ಈ ಗುರುತರ ಜವಾಬ್ದಾರಿಯಿಂದ ವಿಶ್ವನಾಥಸಾಹುಕಾರರ ಸಹಕಾರ ಸೇವೆಯು ಅಧಿಕೃತವಾಗಿ ಪ್ರಾರಂಭವಾಯಿತು.

* * * * *

# 5

## ತರುಣನ ಹೆಗಲೇರಿದ ಹೊಣೆಗಾರಿಕೆ

ಒಂದಾದ ಮೇಲೊಂದು ಹೊಣೆಗಾರಿಕೆಯ ಸರಮಾಲೆ ವಿಶ್ವನಾಥ ಸಾಹುಕಾರರ ಕೊರಳನ್ನು ಅಲಂಕರಿಸತೊಡಗಿದವು. ಅವು ಕೊರಳಿಗೆ ಭಾರವೋ ಹಗುರವೋ ಯೋಚಿಸಲು ಅವರಿಗೆ ಪುರಸೊತ್ತಿರಲಿಲ್ಲ. ಬಿಸಿರಕ್ತದ ತರುಣನಿಗೆ ಪ್ರತಿಷ್ಠಿತ ಮನೆತನದ ಹಿನ್ನೆಲೆಯಿತ್ತು. ಊರ ಹಿರಿಯರ ಪ್ರೋತ್ಸಾಹ ಬೆನ್ನಿಗಿತ್ತು. ಓದಿನ ಸಂಸ್ಕಾರ ಒಳಮನಸ್ಸನ್ನು ಬೆಳಗಿಸಿತ್ತು. ಹೊಸ ಹೊಸ ಕನಸುಗಳು ಕಣ್ಮುಂದೆ ಕುಣಿಯುತ್ತಿದ್ದವು. ಕನಸುಗಳನ್ನು ನನಸು ಮಾಡುವ ಛಲವೂ ಇತ್ತು. ಸ್ನೇಹದ ಶಿಸ್ತು ಇತ್ತು. ಸೇವೆಯ ಹಂಬಲವಿತ್ತು. ಸಾಮಾಜಿಕ ರಂಗದಲ್ಲಿ ಈಸಿ ಪಾರಾಗಲು ಬೇಕಾಗುವ ಎಲ್ಲ ಗುಣಗಳು ವಿಶ್ವನಾಥರ ವ್ಯಕ್ತಿತ್ವದಲ್ಲಿದ್ದವು. ಹಿರಿಯರಾದ ಶ್ರೀಪಾಲಪ್ಪ ಮುನ್ನೋಳಿ ಬೆಂಬಲಕ್ಕೆ ನಿಂತರು. ಬಸವರಾಜ ಕತ್ತಿ (ಸೆಕ್ರೆಟರಿ), ಧನಪಾಲಪ್ಪ ಮುನ್ನೋಳಿ, ಶಿವಪುತ್ರಪ್ಪ ಬೆಲ್ಲದ, ಸುರೇಂದ್ರ ಖೇಮಲಾಪುರೆ ಇವರೆಲ್ಲ ಇವರೊಂದಿಗೆ ಟೊಂಕಕಟ್ಟಿಕೊಂಡು ನಿಂತುಕೊಂಡರು. ಒಗ್ಗೂಡಿದವರಿಗೆ ಗುಡ್ಡವೂ ಕಡ್ಡಿಯಲ್ಲವೆ? ಅಂತೂ ವಿಶ್ವನಾಥ ಕತ್ತಿ ಸಾಹುಕಾರರ ಅಧ್ಯಕ್ಷತೆಯಲ್ಲಿ ಬೆಲ್ಲದ ಬಾಗೇವಾಡಿಯ ಅರ್ಬನ್ ಕೋ–ಆಪ್ ಬ್ಯಾಂಕಿನ ರಥವು ಕಾಲಚಕ್ರದ ಮೇಲೆ ಸುಸೂತ್ರವಾಗಿ ಉರುಳತೊಡಗಿತು.

ಇದೇ ಕಾಲಘಟ್ಟದಲ್ಲಿ ಮದುವೆಯ ಸಿದ್ಧತೆಯೂ ನಡೆಯಿತು. ಯೋಗ್ಯ ಕನ್ಯೆಯ ಹುಡುಕಾಟದಲ್ಲಿದ್ದಾಗ ಖಡಕಲಾಟದ ನರಸಗೌಡ ರಾಮಗೌಡ ಪಾಟೀಲರ ಹಿರಿಯ ಮಗಳು ರಾಜೇಶ್ವರಿ ಜೊತೆಗೆ ವಿವಾಹ ನಿಶ್ಚಯವಾಯಿತು. ಕತ್ತಿ ಅವರ ಹಾಗೆಯೇ ಖಡಕಲಾಟದ ಗೌಡರದೂ ಶ್ರೀಮಂತ ಮನೆತನ. ದೊಡ್ಡ ಅವಿಭಕ್ತ ಕುಟುಂಬ ಅವರದು. ಕತ್ತಿ ಮನೆತನದ ಘನತೆ ಗೌರವಕ್ಕೆ ತಕ್ಕಂತೆ ಅವರು ಮುಂದಾಗಿ ನಿಂತು ಮದುವೆಯ ಏರ್ಪಾಟು ಮಾಡಿದರು. ಹಾದಿ ಬೀದಿಗೆ ತಳಿರು ತೋರಣ ಕಟ್ಟಿದರು. ಊರಿಗೇ ಊಟದ ಬಿನ್ನಹವಿತ್ತರು. ಹೋಳಿಗೆ, ಮಾವಿನ ಸೀಕರಣೆಯ ಸುಗ್ರಾಸ ಭೋಜನ ಬಡಿಸಿದರು. ಜನರು ಮರೆಯಲಾಗದಂತೆ ಭರ್ಜರಿ ಮದುವೆ ಮಾಡಿದರು. ವಿಶ್ವನಾಥ ಕತ್ತಿ ಸಾಹುಕಾರರು ರಾಜೇಶ್ವರಿಯವರ ಕೈ ಹಿಡಿದು ದಾಂಪತ್ಯ ಜೀವನಕ್ಕೆ ಕಾಲಿಟ್ಟರು. ಅಪ್ಪ, ಅಣ್ಣ ಇದ್ದರೆ ಈ ಮದುವೆಯ ಸಂತೋಷ ಇನ್ನೂ ಇಮ್ಮಡಿಸಬಹುದಿತ್ತೆಂಬ ಕೊರಗು ಮಾತ್ರ ಅವರನ್ನು ಕಾಡುತ್ತಿತ್ತು. ಆದರೇನು

ಪರಿಸ್ಥಿತಿಗೆ ಹೊಂದಿಕೊಳ್ಳಲೇಬೇಕೆಂಬ ಪಾಠ ಅವರನ್ನು ಗಟ್ಟಿಗೊಳಿಸಿತ್ತು. ಊರ ಹಿರಿಯರು ಕೊಟ್ಟ ಸಹಕಾರ, ತುಂಬಿದ ಧೈರ್ಯದಿಂದ ಸಂಸಾರದ ಹೊಸ ನೊಗ ಹೊತ್ತರು. ನಗುನಗುತಾ ಬಾಳುವ ಕಲೆ ರೂಢಿಸಿಕೊಂಡರು. ಅವಿಭಕ್ತ ಕುಟುಂಬದಲ್ಲಿ ಹಿರಿಯ ಮಗಳಾಗಿ ಹುಟ್ಟಿ ಅತ್ಯಂತ ಮುದ್ದಿನಿಂದ ಬೆಳೆದಿದ್ದ ರಾಜೇಶ್ವರಿಯವರನ್ನು ಯಾವುದೇ ಕೊರತೆಯಾಗದಂತೆ ನೋಡಿಕೊಳ್ಳುವುದಾಗಿ ಭರವಸೆ ಕೊಟ್ಟರು. ಅದೇ ಪ್ರಕಾರ ತವರಿನ ಚಿಂತೆ ಮಾಡದಂತೆ ಪ್ರೀತಿಯಿಂದ ನಡೆದುಕೊಂಡರು. ಸಾಹುಕಾರರು ಪತ್ನಿಯನ್ನು ಯಾವಾಗಲೂ 'ಬಾಯೀ ಸಾಹೇಬ್' ಎಂದೇ ಪ್ರೀತಿಯಿಂದ ಕರೆಯುತ್ತಿದ್ದರು. ಅವರದು ಅನ್ಯೋನ್ಯ ದಾಂಪತ್ಯ. ಗಂಡು ಹೆಚ್ಚು ಹೆಣ್ಣು ಕಡಿಮೆ ಎಂಬ ಭಾವನೆ ಅವರ ಬಳಿಯಲ್ಲಿ ಸುಳಿಯಲಿಲ್ಲ. ಹಾಗಾಗಿ ಮನೆ ತುಂಬಿದ ಮಡದಿಯನ್ನು ಮನದುಂಬಿ ಪ್ರೀತಿಸಿದರು, ಹೃದಯ ತುಂಬಿ ಗೌರವಿಸಿದರು. ಮಕ್ಕಳ ವಿಷಯದಲ್ಲಿಯೂ ಅಷ್ಟೇ. ಮಕ್ಕಳೊಂದಿಗೆ ಮಕ್ಕಳಾಗಿ ಆಡುತ್ತಿದ್ದರು. ಬೆಳೆದ ಮಕ್ಕಳನ್ನು ಗೆಳೆಯರಂತೆ ನೋಡಿಕೊಂಡರು.

* * * * *

6

# ಕುಟುಂಬ ಜೀವನ

## 'ಸ್ನೇಹ' ಸಂಪದ

ಸಮಾಜದಲ್ಲಿ ಕೆಲವರು ಲೋಕಜೀವನದ ಬೆನ್ನು ಹತ್ತಿ ಮನೆಯನ್ನು ಮರೆಯುತ್ತಾರೆ. ಮತ್ತೆ ಕೆಲವರು ಲೋಕಜೀವನಕ್ಕೆ ಬೆನ್ನು ಮಾಡಿ ಮನೆ ಮಾರು ಉದ್ಧರಿಸಲು ಹೆಣಗಾಡುತ್ತಾರೆ. ಎರಡನ್ನೂ ತೂಗಿಸಿಕೊಂಡು ಹೋಗುವವರು ವಿರಳ. ವಿಶ್ವನಾಥ ಕತ್ತಿಯವರು ವಿರಳರ ಸಾಲಿನಲ್ಲಿ ನಿಲ್ಲುವವರು. ಅವರು ಮನೆಗೆದ್ದು ಮಾರು ಗೆದ್ದವರು. ಬದುಕಿನ ಬಗೆಗೆ ಅನನ್ಯವಾದ ಪ್ರೀತಿ. ಬಡವರಿರಲಿ ಶ್ರೀಮಂತರಿರಲಿ ತನ್ನಂತೆಯೇ ಪರರನ್ನು ಬಗೆಯುವ ದೊಡ್ಡ ಗುಣ. ಮಕ್ಕಳಿಂದ ಮುಪ್ಪಿನವರೆಗಿನ ಎಲ್ಲರ ಜೊತೆಗೆ ಬೆರೆತು ಒಂದಾಗುವ ಪಾದರಸ ವ್ಯಕ್ತಿತ್ವ, ಸ್ಪಷ್ಟ ಮಾತು, ಹಾಸ್ಯಪ್ರವೃತ್ತಿ, ಕ್ರೀಡಾ ಮನೋಭಾವ, ಸ್ನೇಹ ಸೇವೆಗಾಗಿ ಸದಾ ಸಿದ್ಧ– ವಿಶ್ವನಾಥ ಕತ್ತಿ ಸಾಹುಕಾರರ ಬಗೆಗೆ ಹೀಗೆಯೇ ಇನ್ನಷ್ಟು ಹೇಳುತ್ತ ಹೋಗಬಹುದು. ಅವರ ಸುತ್ತ ಹರವಿಕೊಂಡಿದ್ದ ಜೀವನ ವಿಶಾಲವಾಗಿತ್ತು. ಸಹಕಾರ ಸಂಘ ಸಂಸ್ಥೆಗಳು, ಗ್ರಾಮ ಸುಧಾರಣೆ, ಸಕ್ಕರೆ ಕಾರಖಾನೆ, ವಿಧಾನ ಪರಿಷತ್ತು–ಬೆಲ್ಲದಬಾಗೇವಾಡಿಯಿಂದ ಬೆಂಗಳೂರಿನವರೆಗೆ ಸ್ನೇಹದ ಬಳ್ಳಿ ಹರಡಿಕೊಂಡಿತ್ತು. ಕತ್ತಿ ಸಾಹುಕಾರರು ಜೀವನದಲ್ಲಿ ಯಾವುದನ್ನೂ ಹಗುರೆಂದು ಪರಿಗಣಿಸಲಿಲ್ಲ. ಹಾಗೆಯೇ ಭಾರವೆಂದೂ ಚಡಪಡಿಸಲಿಲ್ಲ. ಅವರದು ಸಮರಸದ ದೃಷ್ಟಿಕೋನವಾಗಿತ್ತು. ಕಣ್ಣೆದುರಿನ ಬದುಕು ಅವರಿಗೆ ಅನರ್ಘ್ಯರತ್ನವಾಗಿತ್ತು. ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪನವರು ಬರೆದ ಕವನದ ಸಾಲುಗಳಂತೆ–

**ಎಲ್ಲೋ ಹುಡುಕಿದೆ ಇಲ್ಲದ ದೇವರ**
**ಕಲ್ಲು ಮಣ್ಣುಗಳ ಗುಡಿಯೊಳಗೆ**
**ಇಲ್ಲೇ ಇರುವ ಪ್ರೀತಿ–ಸ್ನೇಹಗಳ**
**ಗುರುತಿಸದೆನು ನಮ್ಮೊಳಗೆ**

ವಿಶ್ವನಾಥ ಕತ್ತಿಯವರದು ಪ್ರೀತಿ–ಸ್ನೇಹಗಳ ಜಗತ್ತು. ಸಾಹುಕಾರರಿಗೆ ಮನೆತನದಿಂದ ಬಂದ ಶ್ರೀಮಂತಿಕೆ ಇತ್ತು. ಜನಬಲವಿತ್ತು. ಅಧಿಕಾರವಿತ್ತು. ಗತ್ತಿನಿಂದ ಬದುಕಲು ಬೇಕಾದ ಸಕಲ ಸವಲತ್ತುಗಳು ಇದ್ದವು. ಆದರೆ ಅವರೆಂದೂ ಅವನ್ನು ದುರುಪಯೋಗಪಡಿಸಿಕೊಳ್ಳಲಿಲ್ಲ. ನೆಲದ ಬದುಕನ್ನು ಮರೆಯಲಿಲ್ಲ. ಸುತ್ತಲಿನ ಪರಿಸರವನ್ನು ತೊರೆಯಲಿಲ್ಲ. ಇತರರಿಗಿಂತ ತಾನು ಬೇರೆ ಎಂದು ತೋರಿಸಿಕೊಡಲಿಲ್ಲ.

ಸೌಜನ್ಯದ ಅಂಕುಶದಿಂದ ಅಹಂಕಾರದ ಮದಗಜವನ್ನು ಪಳಗಿಸಿದ್ದರು. ಹಣದ ದರ್ಪಕ್ಕಿಂತ ಗುಣದ ದರ್ಪವೇ ಶ್ರೇಷ್ಠವೆಂದಿದ್ದರು. ಅವರು ಶ್ರೀಮಂತರಿಗಿಂತ ಬಡವರನ್ನೇ ನಂಬಿದರು. 'ಶ್ರೀಮಂತರು ಅಲ್ಪಸಂಖ್ಯಾತರು ನಾನು ಅವರ ಸದಸ್ಯ ಅಲ್ಲ, ಬಹುಸಂಖ್ಯಾತರಿರುವ ಬಡವರ ಸದಸ್ಯ' ಎಂದು ಅಭಿಮಾನದಿಂದ ಹೇಳುತ್ತಿದ್ದರು. ಅಂತೆಯೇ ಅವರು ವಿಧಾನ ಪರಿಷತ್ತಿನ ಸದಸ್ಯರಾದ ಮೇಲೆಯೂ ಹಣಮಂತ ದೇವರ ಕಟ್ಟೆಯ ಮೇಲೆ, ಬ್ಯಾಂಕಿನ ಮುಂದಿನ ಅಂಗಳದಲ್ಲಿ ಕುಳಿತು ಎಲ್ಲರೊಂದಿಗೆ ಸೇರಿ ಹರಟೆ ಹೊಡೆದರು. ಮಕ್ಕಳೊಂದಿಗೆ ಆಟ ಆಡಿದರು. ತಮ್ಮ ಊರು, ಊರಿನ ಜನರ ಬಗೆಗೆ ಸುಂದರ ಕನಸುಗಳನ್ನು ಕಂಡರು.

ಧರ್ಮಪತ್ನಿ ರಾಜೇಶ್ವರಿಯವರು ವಿಶ್ವನಾಥ ಕತ್ತಿಯವರ ಬದುಕಿನ ಉಸಿರಾಗಿದ್ದರು. ಪತಿಯ ಧ್ಯೇಯ ಧೋರಣೆ, ಜೀವನಶೈಲಿ, ಪರೋಪಕಾರ ಚಟುವಟಿಕೆಗಳಿಗೆ ರಾಜೇಶ್ವರಿಯವರು ಎಂದೂ ಅಡ್ಡಬರಲಿಲ್ಲ. ಅವರನ್ನು ವಿಚಲಿತಗೊಳಿಸಲಿಲ್ಲ. ಕತ್ತಿಯವರ ಮನೆತನ ದೊಡ್ಡದು. ಮನೆ-ಮಂದಿ, ಬಂಧು ಬಳಗದವರಿಂದ ಮನೆ ಯಾವಾಗಲೂ ತುಂಬಿರುತ್ತಿತ್ತು. ಸಾಹುಕಾರರಿಗೆ ಮನೆತುಂಬ ಮಂದಿ ಇದ್ದಾಗ ಅತೀವ ಸಂತೋಷ. ಎಲ್ಲರನ್ನು ನಗಿಸುತ್ತ, ಮಕ್ಕಳನ್ನು ಆಡಿಸುತ್ತ ಖುಷಿಯಾಗಿರುತ್ತಿದ್ದರು. ಮನೆಗೆ ಬಂದು ಹೋಗುವವರ ಯೋಗಕ್ಷೇಮವೆಲ್ಲ ರಾಜೇಶ್ವರಿತಾಯಿಯವರದು. ಮಕ್ಕಳ ಆರೋಗ್ಯ, ಶಾಲೆ ಎಲ್ಲವೂ ಚಾಚೂ ತಪ್ಪದಂತೆ ನೋಡಿಕೊಳ್ಳುವವರು ಇವರೇ. ಸಾಹುಕಾರರು ಇವರಿಗೆ ಪ್ರೀತಿಯಿಂದ 'ಬಾಯೀ ಸಾಹೇಬ್' ಎಂದು ಕರೆಯುತ್ತಿದ್ದರು. ಇಬ್ಬರದೂ ಅನ್ಯೋನ್ಯವಾದ ದಾಂಪತ್ಯ. ಪರಸ್ಪರ ಅರಿತು. ಅರ್ಥ ಮಾಡಿಕೊಂಡು ಬದುಕುವ ಕಲೆ ಇವರಿಗೆ ಕರಗತವಾಗಿತ್ತು. ಸಾರ್ವಜನಿಕ ಜೀವನದಲ್ಲಿ, ಚಟುವಟಿಕೆಗಳಲ್ಲಿ ಸಾಹುಕಾರರು ಮನೆಯ ಕಡೆಗೆ ನಿರ್ಲಕ್ಷ್ಯ ಮಾಡುತ್ತಿರಲಿಲ್ಲ. ಮಡದಿ ಮಕ್ಕಳ ಜೊತೆಗೂ ಕಾಲ ಕಳೆಯುತ್ತ ಸಂತೋಷವಾಗಿರುತ್ತಿದ್ದರು. ವರುಷಕ್ಕೊಂದೆರಡು ಬಾರಿ ಕುಟುಂಬಸಮೇತ ಐತಿಹಾಸಿಕ ಇಲ್ಲವೆ ಪ್ರೇಕ್ಷಣೀಯ ಸ್ಥಳಗಳಿಗೆ ಹೋಗಿ ಬರುತ್ತಿದ್ದರು. ಮುಂಬಯಿ, ಗೋವಾ, ಬೆಂಗಳೂರು ನಗರಗಳಲ್ಲಿ ಕ್ರಿಕೆಟ್ ಮ್ಯಾಚಗಳಿದ್ದರೆ ಕುಟುಂಬ ಸಮೇತ ಪ್ರವಾಸ. 'ಕ್ರಿಕೆಟ್‌ನಲ್ಲಿ ಆಸಕ್ತಿ ಇಲ್ಲ' ಎಂದು ಪತ್ನಿ ಹೇಳಿದರೂ ಕೇಳುತ್ತಿರಲಿಲ್ಲ. ಒಂದು ಸಲ ಮುಂಬಯಿಯಲ್ಲಿ ಜರುಗುತ್ತಿದ್ದ ಕ್ರಿಕೆಟ್ ಮ್ಯಾಚ್ ನೋಡಲು ವಿಮಾನ ಮೂಲಕ ಅವರನ್ನು ಕರೆದುಕೊಂಡು ಹೋಗಿದ್ದರು. ಆಗಾಗ ಇಂತಹ ಪ್ರವಾಸ ಗೆಳೆಯರ ಜೊತೆಗೂ ಸಾಗುತ್ತಿತ್ತು. ಖರ್ಚು ವೆಚ್ಚದ ವಿಷಯದಲ್ಲಿ ಸಾಹುಕಾರರು ಹೆಸರಿಗೆ ತಕ್ಕಂತೆ ಸಾಹುಕಾರರೇ ಆಗಿದ್ದರು.

ದೇವರು-ಧರ್ಮದ ಬಗೆಗೆ ಅವರ ಸಂಬಂಧ ಅಷ್ಟಕಷ್ಟೇ. ಮುಂಜಾನೆ ಸ್ನಾನ ಮಾಡಿ ದೇವರ ಮನೆಗೆ ಹೋಗಿ ಒಂದೆರಡು ನಿಮಿಷ ಕೈ ಮುಗಿದು ಹೊರಬಂದರೆ ಮುಗಿಯಿತು ಅವರ ದೇವರ ಪೂಜೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಮೋಜಿಗಾಗಿ ಅವರ ಬಗೆಗೆ ಒಂದು ಮಾತು ಹೇಳುತ್ತಾರೆ. ಬಿ.ಡಿ.ಜತ್ತಿಯವರು ಜತೆಯಲ್ಲಿದ್ದಾಗ ಢಾಳವಾಗಿ ವಿಭೂತಿ ಹಚ್ಚಿಕೊಳ್ಳುತ್ತಿದ್ದರಂತೆ ಇವರ ವಿಭೂತಿ ಭೂಷಣ ಹಣೆ ನೋಡಿ ಜತ್ತಿಯವರೂ ನಗುತ್ತಿದ್ದರಂತೆ. ದೀಪಾವಳಿ ಹಬ್ಬಕ್ಕೆ ಮಾತ್ರ ಸಹೋದರಿಯರಿಂದ ಆರತಿ ಬೆಳಗಿಸಿಕೊಳ್ಳಲು ಮರೆಯುತ್ತಿರಲಿಲ್ಲ. ಆರತಿ ಬೆಳಗಲೆಂದು ಬೆಳಗಾವಿಯಿಂದ ಅಕ್ಕ ಮೃಣಾಲಿನಿ ಬರಲೇಬೇಕು. ಇವರು ಷಣ್ಮುಖಪ್ಪ-ಪದ್ಮಾವತಿ ಅವರ ಸೊಸೆ. ಇವರು ನೆನಪಿಸಿಕೊಳ್ಳುವಂತೆ 'ಬೆಳಗಾವಿಯಿಂದ ನಾನು ಹೋಗುವವರೆಗೆ ನನ್ನ ದಾರಿ ನೋಡುತ್ತ ಹಾಗೆಯೇ ಕೂಡುತ್ತಿದ್ದ ಈಸು(ವಿಶ್ವನಾಥ). ನಾನು ಆರತಿ ಮಾಡಿದ ಮೇಲೆಯೇ ಮುಂದಿನ ದಿನಚರಿ. ಅಕ್ಕಂದಿರ ಬಗ್ಗೆ ಬಹಳ ಪ್ರೀತಿ ಇತ್ತು'.[4] ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡಿದ್ದರು. ಅಣ್ಣನ ಪ್ರೀತಿಯೂ ಬಹಳ ದಿನ ಸಿಗಲಿಲ್ಲ. ಹೀಗಾಗಿ ಅಕ್ಕಂದಿರ ಬಗೆಗೆ ವಿಶೇಷ ಭಕ್ತಿ. ಅವರು ಹಬ್ಬದ ಸಂದರ್ಭದಲ್ಲಿ ತಪ್ಪದೇ ಬರಬೇಕು. ತಮ್ಮನ್ನು ಆಶೀರ್ವದಿಸಬೇಕು ಎಂದು ಆಶಿಸುತ್ತಿದ್ದರು. ಇವರ ಕೌಟುಂಬಿಕ ಜೀವನ ನೆಮ್ಮದಿಯ ಜೀವನವಾಗಿತ್ತು.

1961 ರಲ್ಲಿ ಉಮೇಶ ಜನಿಸಿದರು. 1962ರಲ್ಲಿ ಮಗಳು ಪೂರ್ಣಿಮಾ, 1965ರಲ್ಲಿ ರಮೇಶ, 1966 ರಲ್ಲಿ ಹರ್ಷಾ ಜನಿಸಿದರು. ಮಕ್ಕಳ ವಿಷಯದಲ್ಲಿ ಅವರ ಪ್ರೀತಿ ಅನಾದೃಶ್ಯವಾಗಿತ್ತು. ಹೊರಗೆ ದೊಡ್ಡವರ ಜೊತೆಗೆ ದೊಡ್ಡ ದೊಡ್ಡ ವ್ಯವಹಾರಗಳನ್ನು ನಿರ್ವಹಿಸಿ, ಮನೆಗೆ ಬಂದರೆ ಮಕ್ಕಳ ಜೊತೆಗೆ ಚೆಂಡಿನಾಟ, ಕುಂಟಲಪಿ ಆಟ ಆಡುತ್ತಿದ್ದರು. ಆಗೀಗ ಗಂಡುಮಕ್ಕಳಿಗೆ ಒಂದಿಷ್ಟು ಗದರಿಸುತ್ತಿದ್ದರಾದರೂ ಹೆಣ್ಣುಮಕ್ಕಳಿಗೆ ಮಾತ್ರ ಹೆದರಿಕೆ-ಗದರಿಕೆ ಏನೂ ಇಲ್ಲ. 'ಅವ್ವಾ', 'ಮಗನ' ಎಂದು ಹೆಣ್ಣು ಮಕ್ಕಳಿಗೆ ಗಂಡುಮಕ್ಕಳಿಗಿಂತ ಒಂದು ಗುಂಜಿ ಹೆಚ್ಚು ಪ್ರೀತಿಸುತ್ತಿದ್ದರು. ಮನೆಯಲ್ಲಿ ಅವರಿಗೆ ಯಾವುದೂ ಕೊರತೆ ಆಗದಂತೆ ನೋಡಿಕೊಳ್ಳುತ್ತಿದ್ದರು. ರಾತ್ರಿ ಹೊತ್ತು ವಿದ್ಯುತ್ ವ್ಯತ್ಯಯದಿಂದ ಲೈಟ್ ಹೋದರೆ ಅವರಿರುವ ಕೋಣೆಗೆ ತಕ್ಷಣ ಲ್ಯಾಂಪ್ ಇಲ್ಲವೆ ಮೇಣಬತ್ತಿ ಹಿಡಿದು ಹಾಜರಾಗುತ್ತಿದ್ದರು. ಅವರು ಹೆದರಬಾರದೆಂದು ಮುಂಜಾಗ್ರತೆ ವಹಿಸುತ್ತಿದ್ದರು. ಹೆಣ್ಣುಮಕ್ಕಳು ಬರಿ ಅಡಿಗೆ ಮನೆಗೆ ಸೀಮಿತರಾಗಬಾರದೆಂದು ಹೇಳುತ್ತಿದ್ದರು. ಅವರಿಗೆ ಲೋಕಜ್ಞಾನ, ವ್ಯವಹಾರಜ್ಞಾನ ಒದಗಿಸಲು ಪ್ರಯತ್ನಿಸುತ್ತಿದ್ದರು. ಹೆಣ್ಣುಮಕ್ಕಳನ್ನು ಕರೆದುಕೊಂಡು ಅರ್ಬನ್ ಬ್ಯಾಂಕ್ ಇಲ್ಲವೆ ಸಕ್ಕರೆ ಕಾರಖಾನೆಗಳಿಗೆ ಹೋಗುತ್ತಿದ್ದರು. ಅಲ್ಲಿಯ ವ್ಯವಸ್ಥೆಯನ್ನೆಲ್ಲ ವಿವರಿಸುತ್ತಿದ್ದರು. ಬ್ಯಾಂಕಿನ ಖಾತೆ.

ಅದನ್ನು ಉಪಯೋಗಿಸುವ ರೀತಿ ಅವುಗಳ ಮಾಹಿತಿ ಕೊಡುತ್ತಿದ್ದರು. ನಾಳೆ ಮದುವೆಯಾಗಿ ಗಂಡನ ಮನೆಗೆ ಹೋದರೆ ಅಲ್ಲಿ ಅವರಿಗೆ ಯಾವುದೇ ತೊಂದರೆಗಳು ಎದುರಾಗಬಾರದೆಂದು ಅವರನ್ನು ಬದುಕಿಗೆ ಸಿದ್ಧಗೊಳಿಸುವ, ತರಬೇತುಗೊಳಿಸುವ ಮುಂದಾಲೋಚನೆ ಅವರಿಗಿತ್ತು.[5]

ಶಾಲೆಯ ರಜೆಯಲ್ಲಿ ಸಂಬಂಧಿಕರ ಮಕ್ಕಳೆಲ್ಲ ಬೆಲ್ಲದ ಬಾಗೇವಾಡಿಗೆ ಬರುತ್ತಿದ್ದರು. ಆಗ ಅವರನ್ನು ತೋಟಕ್ಕೆ ಕರೆದುಕೊಂಡು ಹೋಗುವ, ಅವರಿಗೆ ಈಜು ಕಲಿಸುವ ಮಾವಿನ ತೋಪಿನಲ್ಲಿ ಮಂಗನಾಟ ಆಡುವ– ಮಕ್ಕಳ ಮನರಂಜಿಸುವ ಕಿಂದರಜೋಗಿಯಾಗಿ ಕತ್ತಿ ಸಾಹುಕಾರರು ಮಕ್ಕಳೊಂದಿಗೆ ಆಡುತ್ತಿದ್ದರು. ಇವರ ಮಾವಿನ ತೋಪು ದೊಡ್ಡದು. ಬೇಸಿಗೆ ರಜೆಯಲ್ಲಿ ಮಕ್ಕಳಿಗೆ ಮಾವಿನ ಹಣ್ಣು ಕೊಡುವುದು, ಮಾವಿನ ಸೀಕರಣೆ ಉಣಿಸುವುದು ತುಂಬಾ ಖುಷಿಯ ವಿಷಯವಾಗಿತ್ತು. ತಂದೆಯ ಜೊತೆಗೆ ಆಟವಾಡಿದ, ಆನಂದ ಅನುಭವಿಸಿದ ಅಂದಿನ ದಿನಗಳನ್ನು ಹಿರಿಯ ಮಗಳು ಪೂರ್ಣಿಮಾ ಅವರು ಹೃದ್ಯವಾಗಿ ನೆನೆಪಿಸಿಕೊಳ್ಳುತ್ತಾರೆ. ಮೊದಲ ಹೆರಿಗೆಯ ಸಂದರ್ಭದಲ್ಲಿ 'ನನಗೇನು ಬೇಕು?' ನನ್ನ ಬಯಕೆ ಏನು? ಎಂದು ಕೇಳುತ್ತಿದ್ದರು. ಒಂದು ಸಲ ಮಗಳು ಪೂರ್ಣಿಮಾ ಅವರು 'ಮಾವಿನ ಹಣ್ಣು ತಿನಬೇಕೆನಿಸಿದೆ' ಎಂದರಂತೆ. ಅದು ನವೆಂಬರ್ ತಿಂಗಳಾಗಿತ್ತು. ಮಾವಿನ ಹಣ್ಣಿನ ಸೀಜನ್ ಆಗಿರಲಿಲ್ಲ. ಆದರೂ ಮಗಳಿಗೆ ಅವರು ನಿರಾಶೆಗೊಳಿಸಲಿಲ್ಲ. ನಾಲ್ಕೇ ದಿನಗಳಲ್ಲಿ ಮುಂಬಯಿಯಿಂದ ಮಾವಿನ ಹಣ್ಣುಗಳನ್ನು ತರಿಸಿಕೊಟ್ಟರು. (ನೋಡಿ ಅನುಬಂಧದಲ್ಲಿಯ 'ನನ್ನ ತಂದೆ' ಲೇಖನ) ತಾವು ತಂದೆಯ ಸುಖ ಉಣ್ಣಲಿಲ್ಲವೆಂಬ ಕೊರಗು ಅವರಿಗೆ ಕಾಡುತ್ತಿತ್ತು. ಅದಕ್ಕಾಗಿಯೇ ತಮ್ಮ ಮಕ್ಕಳು ಅದರಿಂದ ವಂಚಿತರಾಗಬಾರದೆಂದು ನಿರಂತರ ಪ್ರಯತ್ನಿಸುತ್ತಿದ್ದರು. ಪ್ರೀತಿ ವಾತ್ಸಲ್ಯದ ಧಾರೆ ಎರೆಯುತ್ತಿದ್ದರು.

ಎಂ.ಎಲ್.ಸಿ ಆಗಿದ್ದಾಗ ಒಂದು ಸಲ ಲಘು ಹೃದಯಾಘಾತವಾಯಿತು. ಆಗಿನಿಂದಲೆ ಮಕ್ಕಳ ಮದುವೆ ಮಾಡುವ ಯೋಚನೆ ಪ್ರಾರಂಭಿಸಿದರು. ತಂದೆ ಮುಂದೆ ನಿಂತು ಮಕ್ಕಳ ಮದುವೆ ಮಾಡುವ ಸಂಭ್ರಮವೇ ಬೇರೆ. ಅದರಿಂದ ಮಕ್ಕಳು ವಂಚಿತರಾಗಬಾರದು ಎಂದು ಸಾಹುಕಾರರು ಹಿರಿಯ ಮಗಳ ಮದುವೆಗೆ ಸಿದ್ಧತೆ ನಡೆಸಿದರು. ಮಗಳ ಕೈ ಹಿಡಿಯುವ ಅಳಿಯ ರೂಪವಂತ, ಅಧಿಕಾರವಂತ, ಶ್ರೀಮಂತನಾಗಿರಬೇಕು ಎಂದು ತಾಯಿ ತಂದೆಗಳು ಬಯಸುವುದು ಸಹಜ. ಆದರೆ ವಿಶ್ವನಾಥ ಕತ್ತಿ ಸಾಹುಕಾರರು ಅಳಿಯ ಜಾಣನಾಗಿರಬೇಕು–ಬುದ್ಧಿವಂತನಾಗಿರಬೇಕು ಎಂದು ಯೋಚಿಸುತ್ತಿದರು. ಅಂತಹ ಅಳಿಯನನ್ನೇ ಹುಡುಕಿದರು. ಅವರೇ ಅಥಣಿಯ

ಅಣ್ಣಾಸಾಹೇಬ ಎ ಪಾಂಗಿ. ಇವರು ವೈದ್ಯವಿಜ್ಞಾನ ಪದವಿಯನ್ನು ಚಿನ್ನದ ಪದಕ ಸಹಿತ ಪಡೆದಿದ್ದರು. ಪ್ರತಿಭಾವಂತರಾಗಿದ್ದರು. ಇವರಿಗೆ ಹಿರಿಯ ಮಗಳು ಪೂರ್ಣಿಮಾ ಅವರನ್ನು ಧಾರೆಯೆರೆದು ಕೊಟ್ಟರು. ಮದುವೆಯನ್ನು ಅತ್ಯಂತ ಸಂಭ್ರಮದಿಂದ ಮಾಡಿದರು. ಎರಡನೆಯ ಮಗಳು ಹರ್ಷಾ ಅವರಿಗಾದರೂ ಪ್ರತಿಭಾವಂತ ಅಳಿಯನನ್ನೇ ಹುಡುಕಿದರು. ಧಾರವಾಡದ ಕರ್ನಾಟಕ ವಿಜ್ಞಾನ ಮಹಾವಿದ್ಯಾಲಯದಲ್ಲಿ ಪ್ರಾಚಾರ್ಯರಾಗಿದ್ದ ಬಿ.ಬಿ. ಕಣವಿ ಅವರ ಸುಪುತ್ರ ಸತೀಶ ಕಣವಿ. ಮದುವೆ ನಿಶ್ಚಯಿಸಿದರು. ಆದರೆ ಅವರ ಮದುವೆ ಮಾಡುವ ಯೋಗ ಸಾಹುಕಾರರಿಗೆ ಇರಲಿಲ್ಲ.

ಹಿರಿಯ ಮಗ ಉಮೇಶ ಅವರ ಮದುವೆಯನ್ನು 1981ರಲ್ಲಿ ಮಾಡಿದರು. ಈ ವಿಷಯವಾಗಿ ಮುಂದೆ ಮಕ್ಕಳಿಗೆ ತೊಂದರೆಯಾಗಬಾರದೆಂಬ ಯೋಚನೆ ಅವರದಾಗಿತ್ತು. 1984ರಲ್ಲಿ ವಿಧಾನ ಸಭೆ ಚುನಾವಣೆಗೆ ಹುಕ್ಕೇರಿ ಮತಕ್ಷೇತ್ರದಿಂದ ಸ್ಪರ್ಧಿಸಿದ್ದರು. ಒಂದು ದಿನ ಮುಂಜಾನೆ ಕಿರಿಯ ಮಗ ರಮೇಶ ಅವರನ್ನು ಕರೆದು 'ನೀನು ಇಂಜನಿಯರಿಂಗ್ ಕಾಲೇಜಿಗೆ ಎಡ್ಮಿಶನ್ ತೆಗೆದುಕೋ. ಅದಕ್ಕೆ ಬೇಕಾಗುವ ಫೀ ನಾನು ವ್ಯವಸ್ಥೆ ಮಾಡುವೆ. (ಆಗ ಸುಮಾರು 15000 ರೂ. ಫೀ ಇತ್ತು). ಅಲ್ಲದೆ ಮದುವೆ ಕೂಡ ಬೇಗನೆ ಆಗಬೇಕು. ಕನ್ಯೆಯನ್ನು ನಾನು ನೋಡಿರುವೆ. ನೀನೇ ಆಯ್ಕೆ ಮಾಡಿದ ಹುಡಿಗಿ(ಕನ್ಯೆ) ಇದ್ದರೂ ನನ್ನದೇನೂ ತಕರಾರು ಇಲ್ಲ. ಒಟ್ಟಿನಲ್ಲಿ ಆದಷ್ಟು ಬೇಗ ನನ್ನ ಇಂಜನಿಯರ್ ಓದು ಮತ್ತು ಮದುವೆ ಸಮಾರಂಭ ಜರುಗಬೇಕು' ಎಂದು ಚಹಾ ಕುಡಿಯುತ್ತ ಹೇಳಿದರು. ಅವರಿಗೇನು ಹೊಳೆದಿತ್ತೋ ಏನೋ ಅವೆರಡೂ ಜವಾಬ್ದಾರಿ ಮುಗಿಸಬೇಕೆಂಬ ಆತುರವಿತ್ತು. ಆದರೇನು ಮುಂದೆ 15 ದಿನಗಳಲ್ಲಿಯೇ ಅಚಾತುರ್ಯ ನಡೆಯಿತು. ಅವರು ಈ ಲೋಕವನ್ನು ಬಿಟ್ಟುಹೋದರು. ಅವರ ಕುಟುಂಬ ವಾತ್ಸಲ್ಯ ಮೆಲಕು ಹಾಕುವಂತೆ ಇತ್ತು. ಎಂದು ಅಂದಿನ ಈ ಸಂದರ್ಭವನ್ನು ರಮೇಶ ಕತ್ತಿಯವರು ಭಾವುಕರಾಗಿ ಸ್ಮರಿಸುತ್ತಾರೆ.

ವಿಶ್ವನಾಥ ಕತ್ತಿ ಅವರ ಹವ್ಯಾಸಗಳಲ್ಲಿ ಓದು ಮುಖ್ಯವಾಗಿತ್ತು. ಬೀಚಿ, ಎಸ್.ಎಲ್.ಭೈರಪ್ಪ, ತರಾಸು, ಬಸವರಾಜ ಕಟ್ಟೀಮನಿ ಮುಂತಾದವರ ಕಥೆ ಕಾದಂಬರಿಗಳನ್ನು ಮತ್ತು ಬೇಂದ್ರೆ, ಕುವೆಂಪು ಮುಂತಾದವರ ಕವಿತೆಗಳನ್ನು ಪ್ರೀತಿಯಿಂದ ಓದುತ್ತಿದ್ದರು. ಓದಿದ ಸ್ವಾರಸ್ಯಕರ ಸಂದರ್ಭಗಳನ್ನು ಮನೆಯವರಿಗೆಲ್ಲ ಹೇಳುತ್ತಿದ್ದರು. ಬೀಚಿ ಅವರ ಜೋಕುಗಳನ್ನು ಭಾಷಣಗಳಲ್ಲಿ ಧಾರಾಳವಾಗಿ ಉಪಯೋಗಿಸುತ್ತಿದ್ದರು. ಇಂಗ್ಲಿಷ್ ಭಾಷೆ ಸಾಹಿತ್ಯದ ಬಗೆಗೂ ಚೆನ್ನಾಗಿ ಪರಿಚಯವಿತ್ತು. ಇವರ ಇಂಗ್ಲೀಷ್ ಜ್ಞಾನಕ್ಕಾಗಿ ಗೆಳೆಯರ ಬಳಗದಲ್ಲಿ, ಅಧಿಕಾರಿ

ವರ್ಗದಲ್ಲಿ ತುಂಬ ಗೌರವವಿತ್ತು. ಸಾಹುಕಾರರಿಗೆ ಇಂಗ್ಲೀಷ್ ಭಾಷೆಯ ಅಭಿರುಚಿ ಹುಟ್ಟಿಸಿದವರು ಕುಲಕರ್ಣಿ ಸರ್ ಅವರು. ಇವರು ಮಠದ ಹಿಂದಿನ ಶಾಲೆಯಲ್ಲಿ ಕಲಿಸುತ್ತಿದ್ದರು. ಇವರ ಬಗೆಗೆ ಸಾಹುಕಾರರಿಗೆ ತುಂಬ ಗೌರವ. ಮುಂದೆ ರಾಜಕೀಯ ಜೀವನ ಪ್ರವೇಶಿಸಿದ ಮೇಲೆಯೂ ಈ ಗುರುಗಳನ್ನು ಮರೆಯಲಿಲ್ಲ. ಮಹತ್ವದ ಪ್ರಸಂಗಗಳನ್ನು ಮೊದಲು ಅವರಿಗೆ ಹೇಳಿ ಅವರಿಂದ ಆಶೀರ್ವಾದ ಪಡೆಯುತ್ತಿದ್ದರು. ಆ ಮೇಲೆ ಮನೆಯಲ್ಲಿ ತಾಯಿಗೆ, ಮಡದಿಗೆ ಹೇಳುತ್ತಿದ್ದರು. ಸಾಹುಕಾರರ ಓದುವ ಹವ್ಯಾಸವು ಈಗ ಸಂಸದ ಶ್ರೀ ರಮೇಶ ಕತ್ತಿ ಸಾಹುಕಾರರಲ್ಲಿ ಕಾಣುತ್ತೇವೆ.

ಸಾಹುಕಾರರು ಮನೆಗೆ ಇಟ್ಟ ಹೆಸರು 'ಸ್ನೇಹ'. ಈ ಹೆಸರು ಅವರ ಸ್ವಭಾವಕ್ಕೆ ಅನ್ವರ್ಥಕವಾಗಿತ್ತು. ಅವರು ಸ್ನೇಹದ ಗುಣದಿಂದ ವೈರಿಗಳನ್ನೂ ಗೆಳೆಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಅವರ ಮನಸಿನಂತೆಯೇ ಅವರ ಮನೆಯ ಹೆಸರು. ಸಾಹುಕಾರರು ಮಡದಿಗೆ 'ಬಾಯಿಸಾಹೇಬ' ಎಂದು ಪ್ರೀತಿಯಿಂದ, ಗೌರವದಿಂದ ಕರೆಯುತ್ತಿದ್ದರು. ರಾಜೇಶ್ವರಿಯವರಾದರೂ ಅಷ್ಟೇ ಗೌರವದಿಂದ ನಡೆದುಕೊಳ್ಳುತ್ತಿದ್ದರು. ಅವರು ಇತ್ತೀಚೆಗೆ 22–9–2009 ರಂದು ಲಿಂಗೈಕ್ಯರಾದರು. ಸಾಹುಕಾರರ ಸಾಧನೆಯಲ್ಲಿ ಅವರಿಗೂ ಮಹತ್ವದ ಸ್ಥಾನವಿದೆ.

* * * * *

ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಗಸು
ಹೊಸ ಯುಕ್ತಿ ಹಳೆ ತತ್ವದೊಡಗೂಡೆ ಧರ್ಮ
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನ ಜೀವನಕ್ಕೆ–ಮಂಕುತಿಮ್ಮ

– ಡಿ. ವಿ. ಜಿ

7

# ಸಹಕಾರದ ಹಾದಿಯಲ್ಲಿ

ಕರ್ನಾಟಕದ ಸಹಕಾರಿ ಕ್ಷೇತ್ರದಲ್ಲಿ ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಸಾಧನೆ ಅಗ್ರಗಣ್ಯವಾಗಿದೆ. ಇದಕ್ಕೆ ಕಾರಣ ಅಪ್ಪಣಗೌಡ ಪಾಟೀಲರು ಮತ್ತು ಅವರ ಸಮಕಾಲೀನರು. ಸ್ವಾತಂತ್ರ್ಯೋತ್ತರದ ಕಾಲಾವಧಿಯಲ್ಲಿ ಜನಜೀವನದ ಅಭಿವೃದ್ಧಿಗಾಗಿ ಆಚರಣೆಗೆ ಬಂದಿದ್ದ ಸಹಕಾರ ಯೋಜನಗೆಳಿಗೆ ಈ ಭಾಗದಲ್ಲಿ ಚಳವಳಿಯ ರೂಪುಕೊಟ್ಟವರು ಅಪ್ಪಣ್ಣಗೌಡರು (1899–1974) ಇವರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಚಲೇಜಾವ್ ಚಳವಳಿಯಲ್ಲಿ ಭೂಗತಕಾರ್ಯಕರ್ತರಾಗಿ ಕೆಲಸ ಮಾಡಿದ್ದರು. ಸ್ವಾತಂತ್ರ್ಯ ಸಿಕ್ಕ ಮೇಲೆ ಕರ್ನಾಟಕ ಏಕೀಕರಣಕ್ಕಾಗಿಯೂ ಚಳವಳಿ ಮಾಡಿದರು. ಗಾಂಧಿಯುಗದ ಅಪ್ಪಟ ಆದರ್ಶವಾದಿ, ಸಹಕಾರ ಚಟುವಟಿಕೆಗಳ ಕ್ರಿಯಾಶೀಲ ವ್ಯಕ್ತಿಯಾಗಿದ್ದರು ಅಪ್ಪಣ್ಣಗೌಡರು. ಜವಾಹರಲಾಲ ನೆಹರು ಅವರು ಪ್ರಧಾನಿಯಾಗಿ ಜಾರಿಗೆ ತಂದಿದ್ದ ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿ ಅಭಿವೃದ್ಧಿ ಹಾಗು ನೀರಾವರಿ ಕ್ಷೇತ್ರಕ್ಕೆ ವಿಶೇಷ ಆದ್ಯತೆ ನೀಡಲಾಗಿತ್ತು. ಇಂಥ ಯೋಜನೆಗಳ ಫಲ ತಮ್ಮ ಜನರಿಗೂ ತಲುಪಿಸಬೇಕೆಂದು ಅಪ್ಪಣಗೌಡರು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದರು. ಅಸಂಘಟಿತ ರೈತರನ್ನು ಸಂಘಟಿಸಿ ಸರಕಾರದ ಯೋಜನೆಗಳ ಬಗೆಗೆ, ಸಹಕಾರ ಚಟುವಟಿಕೆಗಳ ಬಗೆಗೆ ತಿಳಿಹೇಳಿದರು. 1924 ರಲ್ಲಿಯೇ ಅವರು ಸಂಕೇಶ್ವರದಲ್ಲಿ 'ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ'ವನ್ನು ಸ್ಥಾಪಿಸಿದ್ದರು. ಅದರ ಮುಂದಿನ ಹೆಜ್ಜೆಯಾಗಿ ಕಬ್ಬು ಬೆಳೆಗಾರರ ಗೋಳನ್ನು ನಿವಾರಿಸಲು ಸಕ್ಕರೆ ಕಾರಖಾನೆಯನ್ನು ಸಹಕಾರ ತತ್ವದ ಮೇಲೆ ಪ್ರಾರಂಭಿಸಲು ಮುಂದಾದರು. ಆಗ ಸಂಕೇಶ್ವರದವರೇ ಆದ ಎಂ.ಪಿ. ಪಾಟೀಲರು ಮುಂಬಯಿ ಸರಕಾರದಲ್ಲಿ ಸಚಿವರಾಗಿದ್ದರು. ಅವರೆದುರು ವಿಷಯ ಪ್ರಸ್ತಾಪಿಸಲು ಅವರು ತುಂಬ ಹೃದಯದಿಂದ ನೆರವಿಗೆ ನಿಂತರು. 1956 ರಲ್ಲಿ ಕರ್ನಾಟಕ ಏಕೀಕರಣವಾಯಿತು. ಮೈಸೂರು ರಾಜ್ಯ ನಿರ್ಮಾಣವಾಯಿತು. ಆಗ ರಾಜ್ಯದ ಸಹಕಾರಿ ಸಂಘಗಳ ಪ್ರಥಮ ರಜಿಸ್ಟ್ರಾರ್ ಆಗಿ ಬಿ.ಎ. ಪಾಟೀಲ (ಯಲ್ಲಾಪುರ) ಅಧಿಕಾರ ವಹಿಸಿಕೊಂಡರು. ಅವರ ನೆರವನ್ನು ಪಡೆದು ಅಪ್ಪಣ್ಣಗೌಡರು 1956ರಲ್ಲಿ 'ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ' ಸ್ಥಾಪಿಸಿದರು.

ಸಕ್ಕರೆ ಕಾರ್ಖಾನೆಗಾಗಿ ಶೇರು ಸಂಗ್ರಹಿಸುವ, ಕಟ್ಟಡ ನಿರ್ಮಿಸುವ ಕೆಲಸಗಳಿಗಾಗಿ ಅಪ್ಪಣ್ಣಗೌಡರು ಹುಕ್ಕೇರಿ ಭಾಗದ ಎಲ್ಲ ಊರುಗಳಲ್ಲಿ ಅಡ್ಡಾಡುತ್ತಿದ್ದರು.

ಆ ವೇಳೆಯಲ್ಲಿ ತರುಣರನ್ನು ಹುರುದುಂಬಿಸಿ ಸಹಕಾರ ಚಟುವಟಿಕೆಗಳಿಗೆ ಪ್ರೇರೇಪಿಸುತ್ತಿದ್ದರು. ಹುಕ್ಕೇರಿ ಭಾಗದಲ್ಲಿ ಒಬ್ಬ ಒಳ್ಳೆಯ ಧೀಮಂತ ನಾಯಕನನ್ನು ರೂಪಿಸುವ ದೂರದೃಷ್ಟಿಯೂ ಅವರಿಗಿತ್ತು. ಅದಕ್ಕಾಗಿ ಚಟುವಟಿಕೆಶೀಲ ಯುವ ನಾಯಕರ ಶೋಧದಲ್ಲಿರುವಾಗ ಅವರ ಕಣ್ಣಿಗೆ ಬಿದ್ದವರು ಬೆಲ್ಲದ ಬಾಗೇವಾಡಿಯ ವಿಶ್ವನಾಥ ಕತ್ತಿ ಸಾಹುಕಾರರು. ಇವರು ಆಗಲೇ ತಮ್ಮ ಊರಿನ ಅರ್ಬನ್ ಕೋ ಆಪ್ ಬ್ಯಾಂಕಿನ ಅಧ್ಯಕ್ಷರಾಗಿ ಒಳ್ಳೊಳ್ಳೆಯ ಕೆಲಸಗಳನ್ನು ಮಾಡಿದ್ದರು. ಬ್ಯಾಂಕಿನ ಸೇವಾವಲಯ ವಿಸ್ತರಿಸಿದ್ದರು. ಗ್ರಾಮೀಣ ಭಾಗದ ಜನರ ಆರ್ಥಿಕ ಅಭ್ಯುದಯಕ್ಕಾಗಿ ಹಲವಾರು ಸಾಲ ಯೋಜನೆಗಳನ್ನು ಪ್ರಾರಂಭಿಸಿದ್ದರು. ವ್ಯಾಪಾರ, ಉದ್ಯೋಗ, ಗುಡಿಕೈಗಾರಿಕೆ, ಶಿಕ್ಷಣ, ಮನೆಕಟ್ಟಡ, ವಾಹನ ಖರೀದಿ, ಒಕ್ಕಲುತನಗಳಿಗಾಗಿ ಸಾಲ ಕೊಟ್ಟು ದೀನ-ದುರ್ಬಲರ, ಬಡವರ ಏಳಿಗೆಗಾಗಿ ಶ್ರಮಿಸುತ್ತಿದ್ದರು. 1960 ರಲ್ಲಿ 'ಗ್ರಾಮ ಸುಧಾರಣಾ ಸಮಿತಿ'ಯನ್ನು ಹುಟ್ಟು ಹಾಕಿದ್ದರು. ಅದರಡಿಯಲ್ಲಿ ಆರೋಗ್ಯ, ಕುಡಿಯುವ ನೀರು, ಊರಿನ ರಸ್ತೆ, ಬೆಳಕಿನ ವ್ಯವಸ್ಥೆಗಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಿದ್ದರು. ಇವರ ನೇತೃತ್ವದಲ್ಲಿ ಬೆಲ್ಲದ ಬಾಗೇವಾಡಿ ಸುತ್ತಲಿನ ಊರುಗಳಲ್ಲಿಯೇ ಒಂದು ಆದರ್ಶ ಗ್ರಾಮವಾಗಿ ವಿಕಾಸವಾಗುತ್ತಿತ್ತು. ಈ ಬೆಳವಣಿಗೆಯನ್ನು ಸಹಕಾರಿ ರಂಗದ ಧುರೀಣ ಅಪ್ಪಣ್ಣಗೌಡರು ಸೂಕ್ಷ್ಮವಾಗಿ ಗಮನಿಸಿದ್ದರು. ಊರ ಹಿರಿಯರಿಂದ ವಿಶ್ವನಾಥ ಕತ್ತಿಯವರ ಸಾಹಸದ ಕಥೆಯನ್ನು ಕೇಳಿದ್ದರು. ಈ ವಿವರಗಳಿಂದ ಅವರಿಗೆ 'ತಮ್ಮ ಸಹಕಾರ ಚಟುವಟಿಕೆಗಳ ಉತ್ತರಾಧಿಕಾರಿ ವಿಶ್ವನಾಥ ಕತ್ತಿ' ಎಂಬುದು ಮನವರಿಕೆಯಾಯಿತು. ಆಗ ಅವರು ಸಹಕಾರ ರಂಗದ ಸಕ್ಕರೆ ಕಾರಖಾನೆಯ ತಮ್ಮ ಗರಡಿಗೆ ವಿಶ್ವನಾಥ ಕತ್ತಿಯವರನ್ನು ಸೆಳೆದುಕೊಂಡರು. 1963ರಲ್ಲಿ ಸಕ್ಕರೆ ಕಾರಖಾನೆಯ ಆಡಳಿತ ಮಂಡಳಿಗೆ ನಿರ್ದೇಶಕರನ್ನಾಗಿ ಆಯ್ಕೆ ಮಾಡಿದರು. ಇದರಿಂದ ಸಾಹುಕಾರರ ಕಾರ್ಯಕ್ಷೇತ್ರ ಇನ್ನಷ್ಟು ವಿಸ್ತಾರವಾಯಿತು. ಹುಕ್ಕೇರಿ-ಸಂಕೇಶ್ವರ ಜನರ ಒಡನಾಟ ಗಾಢವಾಗಿ ಬೆಳೆಯಿತು.

ಅಲ್ಪಾವಧಿಯಲ್ಲಿಯೇ ಕತ್ತಿ ಸಾಹುಕಾರರು ಹುಕ್ಕೇರಿ-ಸಂಕೇಶ್ವರ ಭಾಗದಲ್ಲಿ ಜನಾನುರಾಗಿ ಜನನಾಯಕರಾಗಿ ಬೆಳೆದರು. ಅದಕ್ಕೆ ಅವರ ಸಹಕಾರ ಚಟುವಟಿಕೆಗಳು, ಜನಪರ ಧೋರಣೆಗಳೇ ಕಾರಣವೆನ್ನಬೇಕು. ಶುಭ್ರವಾದ ಬಿಳಿ ಧೋತರ, ನೆಹರು ಶರ್ಟ್, ತಲೆಯ ಮೇಲೆ ನೀಟಾದ ಗಾಂಧಿ ಟೊಪ್ಪಿಗೆ, ಮಧ್ಯಮ ನಿಲುವು, ಬಿಳಿ ಬಟ್ಟೆಗಳ ನಡುವೆ ಸದಾ ನಗುವಿನಿಂದ ಅರಳಿದ ಕೆಂಪು ಮುಖ. ಗಂಭೀರ ನಡೆ. ನುಡಿದರೆ ಮುತ್ತಿನ ಹಾರ. ಸಾಹುಕಾರರು ಎದುರು ಕಂಡರೆ ಸಾಕು ಎದ್ದು ಗೌರವದಿಂದ ಕೈ ಮುಗಿಯಬೇಕೆನ್ನುವ ಭಾವ ಜನರಲ್ಲಿ. ಅವರ ಈ ವ್ಯಕ್ತಿತ್ವಕ್ಕೆ ಮನೆತನದಿಂದ ಬಂದ ಶ್ರೀಮಂತಿಕೆ ಇತ್ತು. ಆದರೆ ಅವರೆಂದೂ ಶ್ರೀಮಂತರ ಮಧ್ಯೆದಲ್ಲಿರಲು

ಬಯಸಲಿಲ್ಲ. 'ಸಮಾಜದಲ್ಲಿ ಶ್ರೀಮಂತರ ಸಂಖ್ಯೆ ಅಲ್ಪ' ಬಹುಸಂಖ್ಯಾತರು ಬಡವರು. ಅವರ ಶಕ್ತಿ ದೊಡ್ಡದು. ನನಗೆ ಈ ಬಹುಜನ ಸಮಾಜವೇ ಇಷ್ಟ. ಜನರ ನಡುವೆ ಇದ್ದು ಅವರ ಕಷ್ಟ ಸುಖ ಹಂಚಿಕೊಳ್ಳುವಲ್ಲಿ ಇರುವ ಸುಖ ಶ್ರೀಮಂತರ ಸಹವಾಸದಲ್ಲಿ ಸಿಗುವುದಿಲ್ಲ.' ಎಂದು ವಿಶ್ವನಾಥ ಕತ್ತಿಯವರು ಹೇಳುತ್ತಿದ್ದರು.[6] ಅವರೆಂದೂ ಮನೆಯೊಳಗೆ ಕುಳಿತು ಕಾರಭಾರ ಮಾಡಲಿಲ್ಲ. ಅವರು ಹೆಚ್ಚಾಗಿ ಕೂಡುತ್ತಿದ್ದುದು ಊರ ಹಣಮಂತದೇವರ ಗುಡಿಯ ಕಟ್ಟೆಯ ಮೇಲೆಯೇ. ಅಲ್ಲಿಯೇ ಅವರ ಚರ್ಚೆ, ಸಭೆ, ಲೋಕಾಭಿರಾಮದ ಮಾತುಗಳು. ಮುಂಜಾನೆ ಇಲ್ಲವೆ ಸಂಜೆಯ ಹೊತ್ತು ಊರೊಳಗೆ ಸುತ್ತಾಡಿ ಬರುತ್ತಿದ್ದರು. ಜನರ ಯೋಗಕ್ಷೇಮ ವಿಚಾರಿಸುತ್ತಿದ್ದರು. ಆಗ ಅಲ್ಲಿಯ ಜನರ ಮನೆಗಳ ಮುಂದಿರುವ ಕಟ್ಟೆಗಳ ಮೇಲೆ ಕುಳಿತುಕೊಂಡು ಹರಟೆ ಹೊಡೆಯುತ್ತಿದ್ದರು. ಈ ಬಗೆಯ ದಿನಚರಿಯಿಂದ ಅವರಿಗೆ ಮನೆ ಮನೆಯ ಸ್ಥಿತಿಗತಿಗಳ ಬಗೆಗೆ ಅಭ್ಯಾಸವಿತ್ತು. ಜನರ ಜೊತೆಗೆ ಆತ್ಮೀಯವಾದ ನಂಟಿತ್ತು.

ಸಂಜೆ ಹೊತ್ತು ಸಂಕೇಶ್ವರ ಫ್ಯಾಕ್ಟರಿಯಿಂದ ಊರಿಗೆ ಮರಳಿದರೆ, ಅವರ ಕಾರು ನೇರವಾಗಿ ಮನೆಗೆ ಹೋಗುತ್ತಿರಲಿಲ್ಲ. ಹಣಮಂತದೇವರ ಗುಡಿಯ ಹತ್ತಿರವೇ ಅದು ನಿಲ್ಲಬೇಕು. ಅದು ಪೂರ್ವಯೋಜಿತ. ಸಾಹುಕಾರರು ಇಳಿಯುತ್ತಿದ್ದರು. ಗುಡಿಯ ಕಟ್ಟೆಯ ಮೇಲೆ ಕುಳಿತಿದ್ದ ಜನರ ನಡುವೆ ಕೂಡುತ್ತಿದ್ದರು. ಅಲ್ಲಿಂದಲೇ ಡ್ರಾಯವರನಿಗೆ ಊಟ ತರಲು ಹೇಳುತ್ತಿದ್ದರು. ಆ ಮೇಲೆ ಊರಿನ ಆಗುಹೋಗುಗಳ ಪರಿಶೀಲನೆ (Auditing), ಕುಳಿತಲ್ಲಿಯೇ ಒಂದು ಸಣ್ಣ ಸಭೆ ನಡೆಯುತ್ತಿತ್ತು. ಸಭೆ ಮುಗಿದರೂ ಸಾಹುಕಾರರು ಅಲ್ಲಿಯೇ ಕೂಡುತ್ತಿದ್ದರು. ಅವರಿದ್ದಲ್ಲಿಗೇ ಊಟ ಬರುತ್ತಿತ್ತು. ಅಂಗೈಯಲ್ಲಿ ತಂಗಳ ರೊಟ್ಟಿ ಇಟ್ಟುಕೊಂಡು ಝುಣಕ, ಹಿಂಡಿ, ಮೊಸರು ಕಲಿಸಿಕೊಂಡು, ಉಪ್ಪಿನ ಕಾಯಿ ನಂಜುತ್ತ ಸಂತೋಷದಿಂದ ಉಣ್ಣುತ್ತಿದ್ದರು. ಅವರು ತಾಟು ಉಪಯೋಗಿಸುತ್ತಿದ್ದುದೇ ಕಡಿಮೆ. ಆದರೆ ತಮ್ಮ ಪಕ್ಕದಲ್ಲಿದ್ದವರು ತಾಟಿನಲ್ಲಿಯೇ ಉಣಬೇಕು. ಡ್ರೈವರ್ ಕೂಡ ತಾಟಿನಲ್ಲಿಯೇ ಉಣ್ಣಬೇಕು. ಇದು ಅವರ ಆಗ್ರಹ, ಮನೆ ಮಂದಿಗೆ ತಾಕೀತು ಇತ್ತು. ಬಿಸಿ ಅಡಿಗೆಗಿಂತ ತಂಗಳ ಅಡಿಗೆಯ ಬಗೆಗೆ ವಿಶೇಷ ಪ್ರೀತಿ. ಅನ್ನ ಕೆಡಿಸಬಾರದೆಂಬುದು ಅವರ ಪಾಲಿಸಿ. ಅದನ್ನು ಅಕ್ಷರಶಃ ಪಾಲಿಸುತ್ತಿದ್ದರು.[7]

ವಿಶ್ವನಾಥ ಕತ್ತಿ ಅವರ, ಜನಸೇವೆಯ ಈ ಮಾದರಿ ಅವರೇ ಕಂಡುಕೊಂಡಿದ್ದ ದಾರಿಯಾಗಿತ್ತು, ಜೀವನಶೈಲಿಯಾಗಿತ್ತು. ಅವರೆಂದೂ ಸಾಮಾನ್ಯರಿಗಿಂತ ತಾನು ಭಿನ್ನ ಎಂದು ತೋರಿಸಿಕೊಳ್ಳಲು ಬಯಸುತ್ತಿರಲಿಲ್ಲ. ಇದರಿಂದ ಅವರ ಜನ ಸಂಪರ್ಕ ಬೆಳೆಯಿತು. ಲೋಕಾನುಭವ ಬೆಳೆಯಿತು.

ಸೇವೆಯ ಅವಕಾಶಗಳೂ ಬೆಳೆದವು. ಅಧಿಕಾರ ಅಂತಸ್ತುಗಳು ಅವರು ಬಯಸದೆ ಅವರನ್ನರಸಿ ಬಂದವು. ಇದರಿಂದ ಊರು, ತಾಲೂಕು ಪರಿಸರ ಸುಧಾರಿಸಿತು. ಜನರ ಜೀವನ ಸುಧಾರಣೆಯಾಯಿತು. ಈಗ ಸಾಹುಕಾರರ ಸಹಕಾರ ರಂಗದ ಸೇವೆಯ ಕ್ಷೇತ್ರಗಳನ್ನು ಒಂದೊಂದಾಗಿ ಅವಲೋಕಿಸೋಣ.

**1. ಬೆಲ್ಲದ ಬಾಗೇವಾಡಿ ಅರ್ಬನ್ ಕೋ ಆಪರೇಟಿವ್ಹ್ ಬ್ಯಾಂಕ್**

**(ಬೆಲ್ಲದ ಬಾಗೇವಾಡಿ ಅರ್ಬನ್ ಸೌಹಾರ್ದ ಸಹಕಾರ ಬ್ಯಾಂಕ್)**

ಬಾಗೇವಾಡಿಯಲ್ಲಿ ಎದ್ದು ಕಾಣುವ ಎರಡು ಮಹತ್ವದ ಸಂಸ್ಥೆಗಳಲ್ಲಿ ಒಂದು ಅರ್ಬನ್ ಬ್ಯಾಂಕ್. ಮತ್ತೊಂದು ಕೃಷಿ ಸೇವಾ ಸಹಕಾರಿ ಬ್ಯಾಂಕ್. ಎರಡೂ ಸ್ವಂತ ಕಟ್ಟಡಗಳಲ್ಲಿ ಎದ್ದು ನಿಂತಿರುವ ಸುಸಜ್ಜಿತ ಸುಂದರ ಕಟ್ಟಡಗಳು. ಇತ್ತೀಚೆಗೆ 'ಸಹಕಾರ ಕ್ಷೇತ್ರ ಸಮಸ್ಯೆಗಳ ಆಗರವಾಗಿದೆ. ಅದರ ಅಸ್ತಿತ್ವ ಕುಸಿಯುತ್ತಿದೆ' ಎಂಬುದು ಸಾಮಾನ್ಯವಾದ ಗೊಣಗಾಟ. ಆದರೆ ಬೆಲ್ಲದ ಬಾಗೇವಾಡಿಯ ಈ ಎರಡೂ ಬ್ಯಾಂಕುಗಳು ತಮ್ಮ ಕಾರ್ಯದಕ್ಷತೆಯಲ್ಲಿ, ಕಾರ್ಯಕ್ಷಮತೆಯಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ವ್ಯವಹಾರ ನಡೆಸಿವೆ. ಪ್ರಗತಿಪಥದಲ್ಲಿ ಸಾಗಿವೆ. ಇವತ್ತಿಗೂ ಈ ಎರಡೂ ಬ್ಯಾಂಕ್‌ಗಳ ಆಡಳಿತ ಮಂಡಳಿಗೆ ಚುನಾವಣೆ ನಡೆದಿಲ್ಲ. ಆದರೆ ಎಲ್ಲ ಚಟುವಟಿಕೆಗಳು ಮಾತ್ರ ಸುಸೂತ್ರ, ಪರಸ್ಪರ ಸಮ್ಮತ. ಎರಡೂ ಸಂಸ್ಥೆಗಳು 'ಅತ್ಯುತ್ತಮ ಸಹಕಾರಿ ಸಂಸ್ಥೆ'ಗಳೆಂದು ರಾಜ್ಯಮಟ್ಟದ, ರಾಷ್ಟ್ರಮಟ್ಟದ ಗೌರವಕ್ಕೆ ಪಾತ್ರವಾಗಿವೆ. ಪ್ರಶಸ್ತಿಗಳನ್ನು ಪಡೆದಿವೆ. ಬೆಲ್ಲದ ಬಾಗೇವಾಡಿಯ ಭಾಗ್ಯರೇಖೆಗಳಂತಿರುವ ಈ ಬ್ಯಾಂಕುಗಳ ಏಳಿಗೆ, ಉತ್ತರೋತ್ತರ ಬೆಳವಣಿಗೆಯ ಹಿಂದಿನ ಶಕ್ತಿ ಎಂದರೆ ವಿಶ್ವನಾಥ ಕತ್ತಿ ಅವರು. ಅವರು ಮಾಡಿದ ಉಪಕಾರವನ್ನು ಸ್ಮರಿಸುವುದಕ್ಕಾಗಿಯೇ ಅರ್ಬನ್ ಬ್ಯಾಂಕಿನ ಕಟ್ಟಡದ ಮುಂದೆ ಅವರ ಕಂಚಿನ ಮೂರ್ತಿ ಸ್ಥಾಪಿಸಲಾಗಿದೆ. ಒಳಗಡೆ ವಿಶ್ವನಾಥ ಕತ್ತಿ ಸ್ಮಾರಕ ಭವನವಿದೆ. ಇಂದು ವಿಶ್ವನಾಥ ಕತ್ತಿ ಅವರ ಮಕ್ಕಳಾದ ಮಾನ್ಯ ಉಮೇಶ ಕತ್ತಿ ಹಾಗೂ ಮಾನ್ಯ ರಮೇಶ ಕತ್ತಿ ಅವರ ನೇತೃತ್ವದಲ್ಲಿ ಈ ಬ್ಯಾಂಕುಗಳು ಯಶಸ್ಸಿನ ಪಥದಲ್ಲಿ ಸಾಗಿವೆ.

ವಿಶ್ವನಾಥ ಕತ್ತಿ ಅವರು 1957-58ರಲ್ಲಿ ಅರ್ಬನ್ ಕೋ ಆಪರೇಟಿವ್ಹ್ ಬ್ಯಾಂಕಿನ ಅಧ್ಯಕ್ಷರಾಗುವ ಮೂಲಕ ಸಹಕಾರ ರಂಗವನ್ನು ಪ್ರವೇಶಿಸಿದ್ದನ್ನು ಈಗಾಗಲೇ ಗಮನಿಸಿದ್ದೇವೆ.. ಇವರ ಪ್ರಯತ್ನದಿಂದ ಎರಡು-ಮೂರು ವರುಷಗಳ ಅವಧಿಯಲ್ಲಿಯೇ ಅರ್ಬನ್ ಬ್ಯಾಂಕ್ ಗಣನೀಯ ಪ್ರಗತಿ ಸಾಧಿಸಿತು. ಠೇವಣಿ ಸಂಗ್ರಹ ಹೆಚ್ಚಿತು. ದುಡಿಯುವ ಬಂಡವಾಳ ಬೆಳೆಯಿತು. ಸಾಲದ ಯೋಜನೆಗಳು

ವಿಸ್ತಾರವಾದವು. ಸಂಕೇಶ್ವರ ಸಕ್ಕರೆ ಕಾರಖಾನೆಯಲ್ಲಿ ಅವರು ನಿರ್ದೇಶಕರಾಗಿ ಸೇವೆ ಪ್ರಾರಂಭಿಸಿದ ಮೇಲೆ ಬ್ಯಾಂಕುಗಳ ವ್ಯವಹಾರ ಎರಡು-ಮೂರು ಪಟ್ಟು ಬೆಳೆಯಿತು. ಲಾಭ ಗಳಿಸುವುದೇ ಸಹಕಾರಿ ಬ್ಯಾಂಕಿನ ಮುಖ್ಯ ಉದ್ದೇಶವಲ್ಲ ಎಂದು ಕತ್ತಿ ಸಾಹುಕಾರರು ಸದಸ್ಯರಿಗೆ ಹೊಸ ಹೊಸ ಸವಲತ್ತುಗಳನ್ನು ಕಲ್ಪಿಸಿದರು. ಬಡವರಿಗೆ, ಹಿಂದುಳಿದ ವರ್ಗದವರಿಗೆ, ಮಹಿಳೆಯರಿಗೆ ಸಾಲ ನೀಡುವುದರ ಮೂಲಕ ಊರಿನ ಆರ್ಥಿಕ ಪ್ರಗತಿಗೆ ಕಾರಣರಾದರು. ಕೃಷಿ ಅವಲಂಬಿತ ಉದ್ಯೋಗಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ಕೊಡುವ ಮೂಲಕ ರೈತರ ಜೀವನ ಮಟ್ಟ ಸುಧಾರಣೆಗಾಗಿ ಶ್ರಮಿಸಿದರು.

1970ರಲ್ಲಿ ಬ್ಯಾಂಕಿಗಾಗಿ ಸ್ವಂತ ಕಟ್ಟಡ ನಿರ್ಮಿಸಬೇಕೆಂದು ಕತ್ತಿಯವರು ಕೆಲವು ಯೋಜನೆಗಳನ್ನು ರೂಪಿಸಿದರು. ಮುದ್ದತ್ತಿನ ಠೇವಣಿ, ಕಟ್ಟಡದ ನಿಧಿ ಇತ್ಯಾದಿ ಬಾಬುಗಳ ಮೂಲಕ 65,000 ರೂ. ಕೂಡಿಸಿದರು. 1971 ರಲ್ಲಿ ಕಟ್ಟಡ ಪೂರ್ಣವಾಯಿತು. 1971ರಲ್ಲಿ ಕಟ್ಟಡದ ಉದ್ಘಾಟನೆ ಹಾಗು ಬ್ಯಾಂಕಿನ ಬೆಳ್ಳಿ ಮಹೋತ್ಸವ ಸಮಾರಂಭ ಕೂಡಿಯೇ ಜರುಗಿದವು. ಸಮಾರಂಭಕ್ಕೆ ಪಾಂಡಿಚೇರಿಯಲ್ಲಿ ಗವರ್ನರ್ ಆಗಿದ್ದ ಶ್ರೀಮಾನ್ ಬಿ.ಡಿ. ಜತ್ತಿ ಅವರು ಆಗಮಿಸಿದ್ದರು. ಅದಾದ ಮೇಲೆ ಬ್ಯಾಂಕಿನ ವ್ಯವಹಾರ ಗಣನೀಯವಾಗಿ ಬೆಳೆಯಿತು. ಈ ಬೆಳವಣಿಗೆಯಿಂದ ಹೊಸ ಕಟ್ಟಡವೂ ಸಣ್ಣದಾಗತೊಡಗಿತು. ಮತ್ತೆ ಕತ್ತಿ ಸಾಹುಕಾರರು ವಿಶಾಲವಾದ ಕಟ್ಟಡವೊಂದರ ಕನಸು ಕಾಣತೊಡಗಿದರು. ಅದಕ್ಕಾಗಿ ಸ್ಥಳವನ್ನು ಹುಡುಕಾಡತೊಡಗಿದರು. ಊರಿನ ಮಧ್ಯದಲ್ಲಿಯೇ ಇರುವ ವಿಶಾಲವಾದ ಸ್ಥಳವು ಬ್ಯಾಂಕಿಗಾಗಿ ಯೋಗ್ಯವೆನಿಸಿತು. ಅದನ್ನು ಖರೀದಿಸಲು ಜಿಲ್ಲಾಧಿಕಾರಿಗಳ ಅನುಮತಿ ಪಡೆದರು. ಮತ್ತು ಗಡಹಿಂಗ್ಲಜದ ಬಾಬಾಸಾಹೇಬ ಪಾಟೀಲರಿಂದ ನೀಲನಕ್ಷೆ ಸಿದ್ಧಪಡಿಸಿದರು. ಅದಕ್ಕೆ ತಗಲುವ ದೊಡ್ಡ ಮೊತ್ತದ ನಿಧಿ ಸಂಗ್ರಹಿಸಲು ತುಂಬ ಪರಿಶ್ರಮ ಪಟ್ಟರು. ಶ್ರೀಪಾಲಪ್ಪ ಮುನ್ನೋಳಿ ಬ್ಯಾಂಕಿನ ಸೆಕ್ರೆಟರಿ, ಬಿ.ಎಸ್. ಕತ್ತಿ, ಆರ್.ಟಿ.ಶಿರಾಳಕರ ಮುಂತಾದ ಉತ್ಸಾಹಿ ಜನರನ್ನು ಕರೆದುಕೊಂಡು ಕಟ್ಟಡದ ಸಲುವಾಗಿ ಓಡಾಡಿದರು. ಅವರ ಮನಸ್ಸಿನಂತೆಯೇ ನೂತನ ಕಟ್ಟಡವೂ ರೂಪಗೊಳ್ಳತೊಡಗಿತು. ಇನ್ನೇನು ಅದು ಮುಗಿಯುವ ಹಂತದಲ್ಲಿತ್ತು. ಅದರ ಉದ್ಘಾಟನೆಯ ಜೊತೆಗೆ ದೊಡ್ಡ ಸಮಾರಂಭವನ್ನು ಬೆಲ್ಲದ ಬಾಗೇವಾಡಿಯಲ್ಲಿ ಹಮ್ಮಿಕೊಳ್ಳುವ ಯೋಚನೆಯೂ ಅವರಲ್ಲಿತ್ತು. ಆದರೇನು, ಅದರ ಉದ್ಘಾಟನೆ ಕಣ್ಣಾರೆ ನೋಡುವ ಭಾಗ್ಯ ಅವರಿಗಿರಲಿಲ್ಲ. ಅವರ ಪ್ರಯತ್ನದ ಫಲವಾಗಿಯೇ ತಲೆಯೆತ್ತಿದ್ದ ನೂತನ ಕಟ್ಟಡದ ಉದ್ಘಾಟನೆಯು ಅವರ ಸ್ಮಾರಕ ಕಂಚಿನ ಮೂರ್ತಿಯ ಎದುರಿನಲ್ಲಿ ನೆರವೇರಬೇಕಾಯಿತು.

## 2. ಬೆಲ್ಲದ ಬಾಗೇವಾಡಿ ಕೃಷಿ ಸೇವಾ ಸಹಕಾರಿ ಬ್ಯಾಂಕ್. ಲಿ.

ಬೆಲ್ಲದ ಬಾಗೇವಾಡಿಯ ಕೃಷಿ ಸೇವಾ ಸಹಕಾರಿ ಬ್ಯಾಂಕ್‌ನ ಅಭಿವೃದ್ಧಿಗಾಗಿಯೂ ಶ್ರೀಯುತರ ಸೇವೆ ಅನನ್ಯವಾಗಿದೆ. 27.9.1963 ರಂದು ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಆರಂಭಿಸಿದರು. ರೈತ ಸದಸ್ಯರಿಗೆ, ಕಬ್ಬು ಬೆಳೆಗಾರರಿಗೆ ರಾಸಾಯನಿಕ ಗೊಬ್ಬರ, ಉತ್ತಮ ಬೀಜ, ಆಧುನಿಕ ಉಪಕರಣಗಳನ್ನು ಪೂರೈಸುವುದಕ್ಕಾಗಿ ಸುಲಭದ ಸಾಲ ಯೋಜನೆಯನ್ನು ಇವರು ಜಾರಿಗೆ ತಂದರು. ರೈತರು ಹೆಚ್ಚಿನ ಪ್ರಮಾಣದಲ್ಲಿ ಕಬ್ಬು ಬೆಳೆಯುವುದಕ್ಕೆ ಪ್ರೋತ್ಸಾಹಿಸಿದರು. ಶ್ರೀಪಾಲಪ್ಪ ಮುನ್ನೋಳಿ, ಚಂದ್ರಶೇಖರ ಬೆಲ್ಲದ, ಗುಂಡಪ್ಪ ಖೇಮಲಾಪುರೆ, ಹಣಮಂತ ದೇಶಪಾಂಡೆ, ಚಂದ್ರಕಾಂತ ಮಹಾಂತಪ್ಪ ಕತ್ತಿ–ಈ ಉತ್ಸಾಹಿ ಕಾರ್ಯಪಡೆ ಕಟ್ಟಿಕೊಂಡು ಬ್ಯಾಂಕಿನ ಶ್ರೇಯಸ್ಸಿಗಾಗಿ ದುಡಿದರು. ಜನರಿಗೆ ಜೀವನಾವಶ್ಯಕ ವಸ್ತುಗಳು ಸುಲಭ ದರದಲ್ಲಿ ದೊರೆಯಲು ಬ್ಯಾಂಕ್ ಮೂಲಕ ಏರ್ಪಾಟು ಮಾಡಿದರು. ಜನರಿಗೆ ಸಕಾಲದಲ್ಲಿ, ಸರಿಯಾಗಿ ಬ್ಯಾಂಕ್ ಸೇವೆ ಲಭ್ಯವಾಗಬೇಕೆಂದು ಸಿಬ್ಬಂದಿಯನ್ನು ಹೆಚ್ಚಿಸಿದರು. ಇವರ ಅವಧಿಯಲ್ಲಿಯ ಪ್ರಗತಿಯಿಂದ ಬ್ಯಾಂಕಿನ ಸ್ಥಾನ 'ಅ' ವರ್ಗಕ್ಕೆ ಬಡತಿಯಾಯಿತು.

ವಿಶ್ವನಾಥ ಸಾಹುಕಾರರ ಅವಧಿಯಲ್ಲಿಯೇ ಈ ಬ್ಯಾಂಕಿನ ವಜ್ರಮಹೋತ್ಸವ ಸಮಾರಂಭವು 6.1.1967 ರಂದು ಬಲು ಅದ್ದೂರಿಯಿಂದ ಜರುಗಿತು. ಸಮಾರಂಭಕ್ಕೆ ಆಗಿನ ಮೈಸೂರು ರಾಜ್ಯದ ಆಹಾರ ಸಚಿವರಾಗಿದ್ದ ಬಿ.ಡಿ.ಜತ್ತಿ ಅವರು ಮತ್ತು ಸಂಕೇಶ್ವರದ ಹಿರಿಯ ನಾಯಕ ಅಪ್ಪಣಗೌಡ ಪಾಟೀಲರು ಅತಿಥಿಗಳಾಗಿ ಭಾಗವಹಿಸಿದ್ದರು. ವಿಶ್ವನಾಥ ಕತ್ತಿ ಸಾಹುಕಾರರು ಕರೆದಾಗ ಯಾವುದೇ ಹಿರಿಯ ನಾಯಕರು, ಅಧಿಕಾರಿಗಳು ಬೆಲ್ಲದ ಬಾಗೇವಾಡಿಗೆ ಬರಲು ಇಲ್ಲವೆನ್ನುತ್ತಿರಲಿಲ್ಲ. ಅವರ ಸಹವಾಸಕ್ಕೆ ಬಂದವರು ಅವರನ್ನು ಎಂದಿಗೂ ಮರೆಯುತ್ತಿರಲಿಲ್ಲ. ಅವರ ಸ್ನೇಹಪರುಷದ ಪರಿಣಾಮವು ಅಗಾಧವಾಗಿತ್ತು. ಅವರ ಮಾತಿನ ಚಾತುರ್ಯ, ಕೆಲಸದ ವೈಖರಿ ವಿರೋಧ ಪಕ್ಷದವರನ್ನೂ ಗೆದ್ದು ಬಿಡುತ್ತಿತ್ತು.

ಸಾಹುಕಾರರು ಈ ಬ್ಯಾಂಕಿಗಾಗಿ ಮಾಡಿದ ಮತ್ತೊಂದು ಮಹತ್ವದ ಕೆಲಸವೆಂದರೆ 150 ಟನ್ ಸಾಮಗ್ರಿ ಸಂಗ್ರಹಿಸುವಂಥ ದೊಡ್ಡ ಉಗ್ರಾಣ ಕಟ್ಟಿಸಿದ್ದು. ಮೊದಲಿದ್ದ ಉಗ್ರಾಣಕ್ಕೆ ಹೊಂದಿಕೊಂಡಿದ್ದ ಖಾಲಿ ಜಾಗವನ್ನು ಖರೀದಿಸಿ, ಅಲ್ಲಿ ದೊಡ್ಡದಾದ ಕಟ್ಟಡ ತಲೆಯೆತ್ತುವಂತೆ ಆಡಳಿತ ಮಂಡಳಿಯ ಜೊತೆಗೆ ಓಡಾಡಿದರು. 1969ರಲ್ಲಿ ಉಗ್ರಾಣ ಸಿದ್ಧವಾಯಿತು. 1970 ರವರೆಗೆ ಇವರು ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಆಮೇಲೆ ಪೋಷಕರಾಗಿ, ಮಾರ್ಗದರ್ಶಕರಾಗಿ ಬ್ಯಾಂಕಿನ ಸರ್ವಾಂಗೀಣ ಬೆಳವಣಿಗೆಗೆ ಶ್ರಮಿಸಿದರು. ಬ್ಯಾಂಕಿನ ಪ್ರಗತಿಯ ದೃಷ್ಟಿಯಿಂದ

ಇವರ ಅವಧಿ ಸುವರ್ಣಕಾಲವೆನಿಸಿತು. ಇಂದಿಗೂ ಬೆಲ್ಲದಬಾಗೇವಾಡಿ ಜನರು ಆ ಅವಧಿಯನ್ನು ಅಭಿಮಾನದಿಂದ ನೆನೆಸುತ್ತಾರೆ.

ಊರು ಸುಧಾರಿಸಬೇಕು. ಊರ ಜನರು ಸುಖವಾಗಿರಬೇಕೆಂಬುದು ಸಾಹುಕಾರರ ನಿರಂತರ ಚಿಂತನೆಯಾಗಿತ್ತು. ಅದರ ಫಲವೇ 'ಗ್ರಾಮ ಸುಧಾರಣ ಸಮಿತಿ'. ಅದನ್ನು 1960ರಲ್ಲಿ ಸ್ಥಾಪಿಸಿದರು. ಸಾಮಾನ್ಯ ಜನರಿಗೆ ಮೂಲಭೂತ ಆವಶ್ಯಕತೆಗಳನ್ನು ಪೂರೈಸುವ ಯೋಜನೆಯನ್ನು ರೂಪಿಸಿದರು. ಹಳ್ಳಿಗಳಲ್ಲಿ ಹೆರಿಗೆಯ ಸಂದರ್ಭವೆಂದರೆ ಗಂಡಾಂತರಕಾರಿಯಾದುದು. ಆಸ್ಪತ್ರೆ ಇದ್ದ ಊರುಗಳಿಗೆ ಹೋಗುವಷ್ಟರಲ್ಲಿ ಏನು ಸಂಭವಿಸುವುದೋ ಹೇಳಲು ಬರುತ್ತಿರಲಿಲ್ಲ. ಬಡ ಹೆಣ್ಣು ಮಕ್ಕಳಿಗಂತೂ ಇದೊಂದು ಸಾವು ಬದುಕಿನ ಹೋರಾಟ. ಈ ಸಮಸ್ಯೆಗೆ ಸಾಹುಕಾರರು 'ಹೆರಿಗೆ ಆಸ್ಪತ್ರೆ' ಆರಂಭಿಸಿ ಹೆಣ್ಣುಮಕ್ಕಳಿಗೆ ಅನುಕೂಲ ಒದಗಿಸಿದರು. ಇದಕ್ಕೆ ಎರಡು ಸಾವಿರ ದೇಣಿಗೆ ಕೊಟ್ಟು ಅಜ್ಜಿ ಚನಬಸಮ್ಮನವರ ಹೆಸರಿಟ್ಟರು. ವಾರಕ್ಕೆರಡು ಬಾರಿ ಘಟಪ್ರಭಾದ ಕರ್ನಾಟಕ ಆರೋಗ್ಯಧಾಮದಿಂದ ವೈದ್ಯರು ಬಂದು, ತಪಾಸಣೆ ಮಾಡಲು ವ್ಯವಸ್ಥೆ ಮಾಡಿದರು. ಇದರ ಜೊತೆಗೆ ಕುಡಿಯುವ ನೀರಿನ ಯೋಜನೆ ಬಾಗೇವಾಡಿಗೆ ಮಂಜೂರಾಗಲು ಪ್ರಯತ್ನಿಸಿದರು. ಊರಿಗೆ ವಿದ್ಯುತ್ ಬೆಳಕು ಹರಿದು ಬರಲು ಆಸ್ಥೆ ವಹಿಸಿ ದುಡಿದರು. 1971ರಲ್ಲಿ ರಚನೆಯಾದ ಹುಕ್ಕೇರಿಯ ರೂರಲ್ ಇಲೆಕ್ಟ್ರಿಕ್ ಸೊಸಾಯಿಟಿಯ ನಿರ್ದೇಶಕರಾಗಿ ಆಯ್ಕೆಯಾಗಿ, ಊರಿನ ಭಾಗ್ಯಕ್ಕೆ 'ಬೆಳಕು' ತಂದುಕೊಡುವಲ್ಲಿ ಯಶಸ್ವಿಯಾದರು. ವಿಶ್ವನಾಥ ಕತ್ತಿಯವರಿಗೆ ಮೂಲಭೂತ ಸಮಸ್ಯೆಗಳ ಪರಿಚಯವಿದ್ದುದರಿಂದ ಮತ್ತು ಅವುಗಳ ಪರಿಹಾರದತ್ತ ಆದ್ಯ ಗಮನವಿದ್ದುದರಿಂದ ಅವರು ತಳಮಟ್ಟದ ಸಾಮಾಜಿಕ ಸೇವಕರಾಗಿ ದುಡಿಯಲು ಸಾಧ್ಯವಾಯಿತು. ಮಕ್ಕಳ, ಮಹಿಳೆಯರ, ಬಡವರ ಸಮಸ್ಯೆಗೆ ತೀವ್ರವಾಗಿ ಅವರು ಸ್ಪಂದಿಸಲು ಸಾಧ್ಯವಾಯಿತು.

### 3. ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ, ಸಂಕೇಶ್ವರ

ಹಿರಣ್ಯಕೇಶಿ–ಹುಕ್ಕೇರಿ, ಸಂಕೇಶ್ವರ ಜನರ ಜೀವನದಿ. ರಾಮತೀರ್ಥದ ಘಟ್ಟದ ಬಳಿಯಲ್ಲಿ ಹುಟ್ಟಿ ಹರಿದು ಬರುವ ಈ ನದಿಯ ದೃಶ್ಯ ರಮ್ಯವಾದುದು. ನಿಸರ್ಗದೇವಿ ತನ್ನ ಬಂಗಾರವರ್ಣದ ಕೇಶರಾಶಿ ಬೆನ್ನು ಮೇಲೆ ಹರಡಿಕೊಂಡಿರುವಳೇನೋ ಎಂಬಂತೆ ವರ್ಣರಂಜಿತವಾಗಿ ಕಾಣುವ ನೀರಿನ ಹರಿವು ನೋಡಿ ಜನರು 'ಹಿರಣ್ಯಕೇಶಿ' (ಬಂಗಾರ ಕೂದಲುಳ್ಳವಳು) ಎಂದು ಹೆಸರಿಟ್ಟು ಕರೆದದ್ದು ಔಚಿತ್ಯಪೂರ್ಣವಾಗಿದೆ. ಹೆಸರಿಗೆ ತಕ್ಕಂತೆ ಕರ್ನಾಟಕ–ಮಹಾರಾಷ್ಟ್ರ ಗಡಿಭಾಗದ ರೈತರ ಬದುಕನ್ನು ಬಂಗಾರ ಮಾಡಲು ಈ ನದಿ

ಹರಿಯುತ್ತಿದೆ. ಸಂಕೇಶ್ವರದ ಅಪ್ಪಣ್ಣಗೌಡರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದ ಸಕ್ಕರೆ ಕಾರಖಾನೆಗೂ ನದಿಯ ಹೆಸರನ್ನೇ ಇಡಲಾಗಿದೆ. 'ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ'ಯು ಪುಣೆ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಸಂಕೇಶ್ವರದ ಹತ್ತಿರ ತಲೆಯೆತ್ತಿದೆ. ತನ್ನ ಕಾರ್ಯವೈಖರಿ, ರೈತರ ಹಿತಚಿಂತನೆಯಿಂದ ಈ ಕಾರಖಾನೆ ದೇಶದಲ್ಲಿಯೇ ಹೆಸರುವಾಸಿವಾಗಿದೆ. ಈ ಕಾರಖಾನೆಯ ಶ್ರೇಯೋಭಿವೃದ್ಧಿಯಲ್ಲಿ ವಿಶ್ವನಾಥ ಕತ್ತಿಯವರ ಪಾತ್ರ ಗಮನಾರ್ಹವಾದುದು. ಅಪ್ಪಣ್ಣಗೌಡರ ಜೊತೆಗೆ ಮತ್ತು ಅವರ ನಂತರ ಕಾರಖಾನೆಯನ್ನು ಯಶಸ್ಸಿನ ಪಥದಲ್ಲಿ ಸಾಗಲು ಇವರೂ ತ್ರಿಕರಣಪೂರ್ವಕ ಶ್ರಮಿಸಿದ್ದಾರೆ.

1963ರಲ್ಲಿ ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆಯ ನಿರ್ದೇಶಕರಾಗಿ ಆಯ್ಕೆಯಾದರು. ಹಿರಿಯ ಸ್ವಾತಂತ್ರ್ಯ ಸೇನಾನಿ ಅಪ್ಪಣ್ಣಗೌಡ ಪಾಟೀಲರ ಒಡನಾಡಿಗಳಾಗಿದ್ದ ಇವರು ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆಯ ಅಭಿವೃದ್ಧಿ ಕಾರ್ಯದಲ್ಲಿ ತಮ್ಮದೇ ಆದ ವಿಶಿಷ್ಟ ಸೇವೆ ಸಲ್ಲಿಸಿದವರು. ಕಾರಖಾನೆಯ ನಿರ್ದೇಶಕ, ವೈಸ್ ಚೇರಮನ್ನ ಹಾಗು ಚೇರಮನ್ನರಾಗಿ ಸೇವೆ ಸಲ್ಲಿಸಿದರು. ಇವರ ಅಧಿಕಾರದ ಅವಧಿಯಲ್ಲಿ ಅಂದರೆ 1968ರಲ್ಲಿ ಸುಮಾರು 82.02 ಲಕ್ಷ ರೂ. ವೆಚ್ಚದಲ್ಲಿ ಕಾರಖಾನೆಯ ಪ್ರತಿದಿನ ಕಬ್ಬು ನುರಿಸುವ ಸಾಮರ್ಥ್ಯವನ್ನು 1250 ಮೆ. ಟನ್ನಿನಿಂದ 1750 ಮೆ. ಟನ್ನಿಗೆ ವಿಸ್ತರಿಸಲಾಯಿತು. ನಂತರ 1975 ರಲ್ಲಿ 102.56 ಲಕ್ಷ ರೂ. ವೆಚ್ಚದಲ್ಲಿ ಕಬ್ಬು ನುರಿಸುವ ಸಾಮರ್ಥ್ಯವನ್ನು 1750 ಮೆ.ಟನ್ನಿನಿಂದ 2600 ಮೆ. ಟನ್ನಿಗೆ ವಿಸ್ತರಿಸಲಾಯಿತು. 1981 ರಲ್ಲಿ 371.70 ಲಕ್ಷ ರೂ. ವೆಚ್ಚದಲ್ಲಿ 2600 ಮೆ. ಟನ್ನಿನಿಂದ 3500 ಮೆ.ಟನ್ನಿಗಳಿಗೆ ವಿಸ್ತರಿಸಲಾಯಿತು.

ಅದೇ ರೀತಿ ಕಾರಖಾನೆಯ ಕಬ್ಬು ನುರಿಸುವಿಕೆಯಿಂದ ಹೊರಬೀಳುವ ಮೊಲ್ಯಾಸಿಸನಿಂದ ಉಪ ಉತ್ಪತ್ತಿಯಾದ ಮದ್ಯಸಾರ ಉತ್ಪಾದನಾ ಘಟಕದ ಕಾರ್ಯವನ್ನು 1972ರಲ್ಲಿ ಕೈಗೆತ್ತಿಕೊಂಡು 70.00 ಲಕ್ಷ ರೂ. ವೆಚ್ಚದಲ್ಲಿ ಪ್ರತಿದಿನ 27000 ಲೀಟರ್ ಮದ್ಯಸಾರ ಉತ್ಪಾದನಾ ಘಟಕವನ್ನು ಸ್ಥಾಪಿಸಲಾಯಿತು. ನಂತರ 1982ರಲ್ಲಿ ಮದ್ಯಸಾರ ಉತ್ಪಾದನಾ ಸಾಮರ್ಥ್ಯವನ್ನು 27,000 ಲೀಟರ್ ದಿಂದ ಪ್ರತಿದಿನ 54,000 ಲೀಟರ್‌ಗಳಿಗೆ ವಿಸ್ತರಿಸಲಾಗಿದ್ದು ಇದಕ್ಕೆ ಒಟ್ಟು 202.76 ಲಕ್ಷ ರೂ. ಖರ್ಚು ತಗಲಿದೆ.

ಸನ್ 1967-68 ನೇ ಕಬ್ಬು ನುರಿಸುವ ಹಂಗಾಮಿಗೆ ಪ್ರತಿ ಟನ್ ಕಬ್ಬಿಗೆ ರೂ. 212-00 ಗಳನ್ನು ನೀಡಿದ್ದು, ಇದು ಇಡೀ ದೇಶದಲ್ಲಿಯೇ ಎಂದೆಂದಿಗೂ ಅಳಿಸಲಾಗದ ದಾಖಲೆ ಎಂಬುದು ಇಂದಿಗೂ ಕೂಡ ಅವಿಸ್ಮರಣೀಯ. ಏಕೆಂದರೆ

ಬಂಗಾರದ ಧಾರಣೆಯು ಒಂದು ತೊಲೆಗೆ 200 ರೂ. ಗಿಂತ ಕಡಿಮೆ ಇದ್ದ ಸಮಯದಲ್ಲಿ ಒಂದು ಟನ್ ಕಬ್ಬಿಗೆ ಬಂಗಾರದ ದರಕ್ಕಿಂತಲೂ ಹೆಚ್ಚಿಗೆ ದರ ನೀಡಿರುವುದು ಒಂದು ಸಾರ್ವಕಾಲಿಕ ದಾಖಲೆಯಾಗಿದೆ. ಇದನ್ನು ಕಾರಖಾನೆಯ ಇತಿಹಾಸದಲ್ಲಿಯೇ ಸುವರ್ಣಾಕ್ಷರಗಳಿಂದ ಬರೆದಿಡುವಂತಾಗಿರುವುದು ಹೆಮ್ಮೆಯ ಸಾಧನೆ. ಕಾರಖಾನೆಯ ಆಡಳಿತ ನಿರ್ವಹಣೆಯಲ್ಲಿ ಅತ್ಯಂತ ಕುಶಾಗ್ರಮತಿಗಳಾಗಿದ್ದ ಇವರು ಅಪ್ಪಣ್ಣಗೌಡರು ಚೇರಮನ್ನರಿದ್ದಾಗ ಹಿರಾಶುಗರ ಮಜದೂರ ಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ಡಿ.ಎಸ್. ಸಮುದ್ರೆ ಅವರ ನೇತೃತ್ವದಲ್ಲಿ ನಡೆದ ಕಾರ್ಮಿಕರ ಮುಷ್ಕರವನ್ನು ಆಡಳಿತ ಮಂಡಳಿ ಹಾಗು ಕಾರ್ಮಿಕರ ಮಧ್ಯೆ ಸಂಧಾನಕಾರರಾಗಿ, ನಡೆಯಬಹುದಾಗಿದ್ದ ಮುಷ್ಕರವನ್ನು ಕಾರಖಾನೆ ಬಂದ ಮಾಡದೇ ಶಾಂತರೀತಿಯಲ್ಲಿ ಬಗೆಹರಿಸಿದರು. ಇವರ ಚಾಣಾಕ್ಷ ಹಾಗೂ ಚಾತುರ್ಯವನ್ನು ಇಂದಿಗೂ ಕೂಡ ಜನರು ಸ್ಮರಿಸುವಂತಾಗಿದೆ.

ಒಮ್ಮೆ ಕಾರ್ಮಿಕರು ಮುಷ್ಕರ ಪ್ರಾರಂಭಿಸಿದರು. ಆಗ ವಿಶ್ವನಾಥ ಕತ್ತಿಯವರು ಬೆಂಗಳೂರಿನಲ್ಲಿದ್ದರು. ಮುಷ್ಕರದ ಸುದ್ದಿ ತಿಳಿದ ಕೂಡಲೆ ಅವರು ಸಂಕೇಶ್ವರಕ್ಕೆ ಧಾವಿಸಿದರು. ಬಂದವರೇ ಕಾರ್ಮಿಕರನ್ನೆಲ್ಲ ಕರೆದು ಯೋಗಕ್ಷೇಮ ವಿಚಾರಿಸಿದರು. ಬೇಡಿಕೆಗಳನ್ನು ಕೇಳಿದರು.' 'ಮೊದಲು ಕಬ್ಬಿನ ಹಾಲು ಕುಡಿಯಿರಿ ಆ ಮೇಲೆ ಮಾತನಾಡೋಣ' ಎಂದರು. ಅವರ ಸ್ನೇಹದ ಮಾತಿಗೆ, ಪ್ರೀತಿಯ ಸಲುಗೆಗೆ ಕಾರ್ಮಿಕರು ಮೆತ್ತಗಾದರು. ಕಬ್ಬಿನ ಹಾಲು ಕುಡಿದರು. ಕಾರ್ಮಿಕರು ಕಬ್ಬಿನ ಹಾಲು ಕುಡಿದು ಸಮಾಧಾನವಾದಾಗ ಹೇಳಿದರು. 'ಶೇಕಡಾ 20%ರಷ್ಟು ಬೋನಸ್ ಕೇಳುತ್ತಿದ್ದೀರಿ. ಕಾರಖಾನೆಯ ಲಾಭ ನಿಮ್ಮ ಶ್ರಮದ್ದು. ನಿಮ್ಮ ಹಣ ನಿಮಗೆ ಕೊಡಲು ನಮಗೇನೂ ಅಭ್ಯಂತರವಿಲ್ಲ. ನೀವೆಲ್ಲ ನಗುನಗುತಾ ಇರಬೇಕು. ಶೇಕಡಾ 40% ರಷ್ಟು ಬೋನಸ್ ನಿಮಗೆ ಕೊಡಲಾಗುವುದು' ಎಂದರು. ಈ ಅನಿರೀಕ್ಷಿತ ಮಾತುಗಳನ್ನು ಕೇಳಿದ ಕಾರ್ಮಿಕರಿಗೆ ಎಲ್ಲಿಲ್ಲದ ಸಂತೋಷ. ಅವರು ವಿಶ್ವನಾಥ ಕತ್ತಿಯವರಿಗೆ ತುಂಬ ಹೃದಯದ ಕೃತಜ್ಞತೆ ಸಲ್ಲಿಸಿದರು. ಕಾರಖಾನೆಯ ಕೆಲಸ ನಿರಾತಂಕವಾಗಿ ಸಾಗಿತು. ಕಾರ್ಮಿಕರ ಹೃದಯ ಗೆಲ್ಲುವ ಕೌಶಲ್ಯ ಅವರಿಗಿತ್ತು. ಇಂತಹ ಹಲವಾರು ನಿದರ್ಶನಗಳನ್ನು ಕಾರಖಾನೆಯ ಚರಿತ್ರೆಯಲ್ಲಿ ನೆನಪಾಗಿ ಉಳಿದಿವೆ.[8]

ಈ ರೀತಿ ಕಾರಖಾನೆಯ ಅಭಿವೃದ್ಧಿಕಾರ್ಯದಲ್ಲಿ ಸಿಂಹಪಾಲು ನೀಡಿದ ಇವರ ಕಾರ್ಯಶೈಲಿ, ಸಹಕಾರ, ಸಾಮಾಜಿಕ, ಶೈಕ್ಷಣಿಕ ಹಾಗೂ ಹತ್ತು ಹಲವು ರಂಗಗಳಲ್ಲಿ ನೀಡಿದ ಇವರ ಅನುಪಮ ಸೇವೆಯನ್ನು ಅನುಲಕ್ಷಿಸಿ 1974ರಲ್ಲಿ ಕರ್ನಾಟಕ ವಿಧಾನ ಪರಿಷತ್ತಿಗೆ ಜರುಗಿದ ಚುನಾವಣೆಯಲ್ಲಿ ಸ್ಥಳೀಯ ಸಂಸ್ಥೆಗಳ

ವತಿಯಿಂದ ಆಯ್ಕೆಯಾದರು. 1976ರಿಂದ 1982 ರವರೆಗೆ ವಿಧಾನ ಪರಿಷತ್ ಸದಸ್ಯರಾಗಿ ಸೇವೆ ಸಲ್ಲಿಸಿದರು. ಹುಕ್ಕೇರಿ ತಾಲೂಕಿನ ಸರ್ವಾಂಗೀಣ ಅಭಿವೃದ್ಧಿಗೆ ಕಾರಣಕರ್ತರಾದರು.

ಅಂದು ಮಾಡಿದ ಅನುಪಮ ಸೇವೆಯಿಂದಾಗಿ ಸಹಕಾರಿ ರಂಗದ ಧೀಮಂತ ನಾಯಕರಾಗಿ ಜನಮಾನಸದಲ್ಲಿ ಇನ್ನೂ ಉಳಿದುಕೊಂಡಿದ್ದಾರೆ.

### 4. ಬೆಳಗಾವಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕ, ಬೆಳಗಾವಿ

ಡಿ.ಸಿ.ಸಿ. ಬ್ಯಾಂಕ್ ರಾಷ್ಟ್ರದಲ್ಲಿಯೇ ಅತಿ ದೊಡ್ಡ ಸಹಕಾರಿ ಬ್ಯಾಂಕ್ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಕರ್ನಾಟಕದ ಮಟ್ಟಿಗೆ ಗ್ರಾಮೀಣ ಅಭಿವೃದ್ಧಿಯಲ್ಲಿ ಈ ಬ್ಯಾಂಕಿನ ಸೇವೆ ಅಗ್ರಮಾನ್ಯವೆಂದು ಗುರುತಿಸಲ್ಪಡುತ್ತದೆ. 10 ಫೆಬ್ರುವರಿ 1919 ರಲ್ಲಿ ಇದು ಕಾರ್ಯಾರಂಭ ಮಾಡಿತು. ಆರಂಭದಲ್ಲಿ ಕೇವಲ 9 ಸಂಘಗಳು, 26 ಸದಸ್ಯರನ್ನು ಹೊಂದಿತ್ತು. ಈಗ ಇದರ ವಹಿವಾಟು ಅನೇಕ ಕೋಟಿಗಳನ್ನು ಮೀರಿದೆ. ಇಂಥ ಐತಿಹಾಸಿಕ ಬ್ಯಾಂಕು ವಜ್ರಮಹೋತ್ಸವದ ಹೊಸ್ತಿಲಲ್ಲಿ ಇರುವಾಗ ವಿಶ್ವನಾಥ ಕತ್ತಿ ಅವರು ನಿರ್ದೇಶಕರಾಗಿ ಬ್ಯಾಂಕಿನ ಆಡಳಿತ ಮಂಡಳಿಯನ್ನು ಪ್ರವೇಶಿಸಿದರು. ಜನವರಿ 1979ರಲ್ಲಿ ಜರುಗಿದ ಅರ್ಬನ್ ಸಹಕಾರಿ ಬ್ಯಾಂಕುಗಳ ಮತದಾರರು ಇವರನ್ನು ಆರಿಸಿ ಕಳಿಸಿದ್ದರು. ಆಗ ಪ್ರಧಾನ ಮಂತ್ರಿಗಳ 20 ಅಂಶಗಳ ಆರ್ಥಿಕ ಕಾರ್ಯಕ್ರಮದ ಅನುಷ್ಠಾನವನ್ನು ಬ್ಯಾಂಕು ವಿಶೇಷ ಆದ್ಯತೆ ಮೇರೆಗೆ ಎತ್ತಿಕೊಂಡಿತ್ತು. ದುರ್ಬಲರಿಗೆ, ಹಿಂದುಳಿದವರಿಗೆ, ಸಣ್ಣ ರೈತರಿಗೆ ಸಾಲದ ಸವಲತ್ತುಗಳನ್ನು ತಲುಪಿಸುವ ಕೆಲಸ ನಡೆದಿತ್ತು. ಶಂಕರರಾವ್ ನಲವಡೆ ಅವರು ಬ್ಯಾಂಕಿನ ಅಧ್ಯಕ್ಷರಾಗಿದ್ದರು. ವಿ.ಎಂ. ಪಟ್ಟೇದ ಅವರು ಸಾಲ ಮತ್ತು ಆರ್ಥಿಕ ವ್ಯವಹಾರಗಳ ಮ್ಯಾನೇಜರರಾಗಿದ್ದರು. ಇವರ ಬಳಗಕ್ಕೆ ಕತ್ತಿ ಸಾಹುಕಾರರು ಸೇರಲು ಬ್ಯಾಂಕಿನ ಚಟುವಟಿಕೆಗಳಿಗೆ ಇನ್ನಷ್ಟು ಸ್ಫೂರ್ತಿ ದೊರೆಯಿತು.

ಬ್ಯಾಂಕ್ ಮ್ಯಾನೇಜರ್ ಆಗಿದ್ದ ವ್ಹಿ.ಎಂ. ಪಟ್ಟೇದ ಅವರು ನೆನಪಿಸಿಕೊಳ್ಳುವ ಪ್ರಕಾರ: 'ವಿಶ್ವನಾಥ ಕತ್ತಿಯವರು ನಿರ್ದೇಶಕರಾಗಿ ಬ್ಯಾಂಕ್‌ನ್ನು ಪ್ರವೇಶಿಸಿದ ಸಂದರ್ಭವು ಅತ್ಯಂತ ಸೂಕ್ಷ್ಮವಾಗಿತ್ತು. ಇಂದಿರಾ ಕಾಂಗ್ರೆಸ್‌ದವರ ಕೈಯಲ್ಲಿ ಅಧಿಕಾರವಿತ್ತು. ಇವರು ಸಂಸ್ಥಾ ಕಾಂಗ್ರೆಸ್ಸಿನವರು. ಬ್ಯಾಂಕಿನ ಏಳಿಗೆಗೆ ಈ ಕಾಂಬಿನೇಶನ್ ಸೂಕ್ತವಲ್ಲ ಎಂಬುದು ಎಲ್ಲರ ಅಭಿಪ್ರಾಯವಾಗಿತ್ತು. ಆದರೆ ವಿಶ್ವನಾಥ ಕತ್ತಿ ಸಾಹುಕಾರರು ತಮ್ಮ ಗುಣಗ್ರಾಹಿ ವ್ಯಕ್ತಿತ್ವದಿಂದ ರಾಜಕೀಯ ಭಿನ್ನಾಭಿಪ್ರಾಯಗಳಿಗೆ ಅವಕಾಶವನ್ನೇ ಕೊಡಲಿಲ್ಲ. ಜನಪರ ಕಾರ್ಯಗಳಲ್ಲಿ ರಾಜಕೀಯ ತರಬಾರದೆಂಬುದು ಅವರ ನಿಲುವಾಗಿತ್ತು. ಹೀಗಾಗಿ ಅವರಿಂದ ಬ್ಯಾಂಕಿನ ಅಭಿವೃದ್ಧಿಗೆ ತೀವ್ರಗತಿ ಒದಗಿತು.

ಜನರ ಕೆಲಸ, ಅಭಿವೃದ್ಧಿಯ ಕೆಲಸ ಎಂದರೆ ಅದೊಂದು ಅವಕಾಶವೆಂದು ತಿಳಿಯುತ್ತಿದ್ದರು. ಅವರೆಂದೂ ಅಭಿವೃದ್ಧಿ ಚಟುವಟಿಕೆಗಳನ್ನು ರಾಜಕೀಯ ಲೆಕ್ಕಾಚಾರದ ತಕ್ಕಡಿಯಲ್ಲಿಟ್ಟು ತೂಗಲಿಲ್ಲ. ಜನರಹಿತ, ಅಭಿವೃದ್ಧಿ ಕೆಲಸ ಎಂದರೆ ಪಕ್ಷಭೇದ ಮರೆತು ಬೆಂಬಲಿಸುತ್ತಿದ್ದರು. ಅಲ್ಲದೆ ಅದನ್ನು ಮುಂದಾಗಿ ನಿಂತು ನಿಭಾಯಿಸುತ್ತಿದ್ದರು. ಇಂತಹ ಗುಣದಿಂದಾಗಿಯೆ ಇವರ ಅವಧಿಯಲ್ಲಿ ಬೆಳಗಾವಿಯ ಡಿ.ಸಿ.ಸಿ. ಬ್ಯಾಂಕ್ ಪಕ್ಷಾತೀತವಾಗಿ ಅಭಿವೃದ್ಧಿ ಚಟುವಟಿಕೆಗಳನ್ನು ಕೈಕೊಂಡಿತು. ಅವುಗಳನ್ನು ಯಶಸ್ವಿಯಾಗಿ ಜಾರಿಗೊಳಿಸಿತು.

ಸಾಹುಕಾರರ ವಿಚಾರ ಪಾರದರ್ಶಕ, ಆಚಾರ ಪಾರದರ್ಶಕ. ದಿಟ್ಟ ನಿಲವು, ನೇರ ನಡೆ, ನಿಸ್ವಾರ್ಥ ಗುಣ. ಹಿಡಿದ ಕೆಲಸ ಮಾಡಿ ಮುಗಿಸುವತನಕ ಬಿಡದ ಛಲ. ಇವರ ನಿರ್ದೇಶನದಲ್ಲಿ ಬ್ಯಾಂಕ್ ತಕರಾರುಗಳಿಲ್ಲದೆ ಕಾರ್ಯಯೋಜನೆಗಳನ್ನು ರೂಪಿಸಿ ಜಾರಿಗೊಳಿಸಿತು.''

ಬಡರೈತರು, ಗ್ರಾಮೀಣ ಪ್ರದೇಶವು ಕತ್ತಿ ಅವರ ಆದ್ಯತೆಯ ಕ್ಷೇತ್ರವಾಗಿತ್ತು. ರೇಶ್ಮೆ ವ್ಯವಸಾಯಕ್ಕೆ ಸಾಲಗಳನ್ನು ಪೂರೈಸಬೇಕೆಂಬ ಸರಕಾರದ ನಿಯಮವನ್ನು ಬ್ಯಾಂಕ ಬೇಗನೆ ಕಾರ್ಯಗತ ಮಾಡಲು ಇವರು ನೆರವಾದರು. ಕೃಷಿ ಉದ್ದಿಮೆಗೆ ಪೂರಕವೆನಿಸುವ ಹೈನುಗಾರಿಕೆ, ಕೋಳಿ ಸಾಕಾಣಿಕೆ, ಒಕ್ಕಲುತನದ ಉಪಕರಣಗಳ ಪೂರೈಕೆ, ನೀರಾವರಿಗಾಗಿ ಪಂಪಸೆಟ್ ಖರೀದಿ, ವಿದ್ಯುತ್ ಸಂಪರ್ಕ ಇತ್ಯಾದಿ ಚಟುವಟಿಕೆಗಳಿಗಾಗಿ ಜಿಲ್ಲೆಯಾದ್ಯಂತ ರೈತರಿಗೆ ಲಕ್ಷಾಂತರ ರೂಪಾಯಿ ಸಾಲಗಳನ್ನು ಪೂರೈಸಲು ಸಹಕರಿಸಿದರು. ಜೊತೆಗೆ ಹುಕ್ಕೇರಿ ಸಂಕೇಶ್ವರ ಭಾಗದ ರೈತರಿಗೂ ಈ ಸಾಲಗಳ ಸೌಲಭ್ಯ ಧಾರಾಳವಾಗಿ ದೊರೆಯುವಂತೆ ಪ್ರಯತ್ನಿಸಿದರು.

ವಿಶ್ವನಾಥ ಕತ್ತಿ ಅವರು ನಿರ್ದೇಶಕರಾಗಿದ್ದ ಅವಧಿಯಲ್ಲಿಯೇ ಬ್ಯಾಂಕಿನ ವಜ್ರಮಹೋತ್ಸವ ಸಮಾರಂಭವು 1, ಜೂನ್ 1980 ರಂದು ಅದ್ದೂರಿಯಾಗಿ ಜರುಗಿತು. ಆಗಿನ ಮುಖ್ಯಮಂತ್ರಿಗಳಾದ ಆರ್. ಗುಂಡೂರಾವ್, ಸಹಕಾರ ಖಾತೆಯ ಸಚಿವರಾದ ಎ.ಬಿ.ಜಕನೂರ, ಅಫೆಕ್ಸ್ ಬ್ಯಾಂಕಿನ ಅಧ್ಯಕ್ಷರಾದ ಜಿ.ಎಲ್.ನಲ್ಲೂರೇಗೌಡರು ಅತಿಥಿಗಳಾಗಿ ಸಮರಂಭದಲ್ಲಿ ಪಾಲಗೊಂಡಿದ್ದರು. ಸಮಾರಂಭದ ಯಶಸ್ಸಿಗಾಗಿ ಇವರು ಆಡಳಿತ ಮಂಡಳಿಯ ಜೊತೆಗೆ ಹಗಲಿರುಳು ಶ್ರಮಿಸಿದರು. ವಿಶ್ವನಾಥ ಕತ್ತಿ ಸಾಹುಕಾರರು 1984 ರ ವರೆಗೆ ಈ ಬ್ಯಾಂಕಿನ ನಿರ್ದೇಶಕರಾಗಿ ಸೇವೆ ಸಲ್ಲಿಸಿದ ಅವಧಿ ಅದೊಂದು ಸ್ಮರಣೀಯ ಅಧ್ಯಾಯ.

## 5 ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ, ಬೆಳಗಾವಿ

ಇದು ಕರ್ನಾಟಕದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆ. 1916ರಲ್ಲಿ ಬೆಳಗಾವಿಯಲ್ಲಿ ಜಿ.ಎ.ಹೈಸ್ಕೂಲ್ ತೆರೆಯುವ ಮೂಲಕ ಶಿಕ್ಷಣ ಸೇವೆ ಪ್ರಾರಂಭಿಸಿತು. ಎಂ.ಆರ್.ಸಾಖರೆ, ಶಿ.ಶಿ.ಬಸವನಾಳ, ಎಚ್.ಎಫ್. ಕಟ್ಟೀಮನಿ, ಬಿ.ಬಿ.ಮಮದಾಪುರ, ಬಿ.ಎಸ್.ಹಂಚಿನಾಳ, ಸರದಾರ ವೀರನಗೌಡ ಪಾಟೀಲ ಹಾಗೂ ಪಂಡಿತಪ್ಪ ಚಿಕ್ಕೋಡಿ– ಈ ಮಹನಿಯರ ಶ್ರಮ, ಸ್ವಾರ್ಥತ್ಯಾಗ, ಶಿಕ್ಷಣ ಪ್ರೇಮದ ಫಲವಾಗಿ ಈ ಸಂಸ್ಥೆ ಅಸ್ತಿತ್ವಕ್ಕೆ ಬಂದಿತು. ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶಕ್ಕೆ ಭರವಸೆಯ ಬೆಳಕಾಯಿತು. ಇಂದು ಶತಮಾನೋತ್ಸವದ ಹೊಸ್ತಿಲಲ್ಲಿರುವ ಈ ಸಂಸ್ಥೆ ಅಂದಾಜು ಇನ್ನೂರು ಅಂಗ ಸಂಸ್ಥೆಗಳನ್ನು ಹೊಂದಿದೆ. ಅತ್ಯಂತ ಸುಸಜ್ಜಿತ ಹೈಟೆಕ್ ಆಸ್ಪತ್ರೆ ಹೊಂದಿದೆ. ಕಲೆ, ವಿಜ್ಞಾನ, ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಅನೇಕ ಶಾಲೆ–ಕಾಲೇಜುಗಳನ್ನು ದೇಶ ವಿದೇಶಗಳಲ್ಲಿ ಹೊಂದಿದೆ. ಸ್ವತಂತ್ರ ವಿಶ್ವವಿದ್ಯಾಲಯವಾಗಿ ಬೆಳೆದಿದೆ. ಮಾನ್ಯ ಪ್ರಭಾಕರ ಕೋರೆ ಅವರ ನೇತೃತ್ವದಲ್ಲಿ ಸಂಸ್ಥೆ ಹೆಮ್ಮರವಾಗಿ ಬೆಳೆಯುತ್ತಿದೆ. 1984 ಕ್ಕಿಂತ ಮೊದಲು ಕೆ.ಎಲ್.ಇ. ಸಂಸ್ಥೆಯು ಸಮರ್ಥ ನಾಯಕನ ಶೋಧದಲ್ಲಿದ್ದಾಗ ಅದಕ್ಕೆ ಪ್ರಭಾಕರ ಕೋರೆಯವರೇ ಸೂಕ್ತವೆಂದು, ಅವರ ಸಾರಥ್ಯದಲ್ಲಿ ಸಂಸ್ಥೆ ಚೆನ್ನಾಗಿ ಬೆಳೆಯುವುದೆಂದು ಭವಿಷ್ಯ ನುಡಿದವರಲ್ಲಿ ವಿಶ್ವನಾಥ ಕತ್ತಿಯವರು ಪ್ರಮುಖರು. ಈ ಕುರಿತು ಬೆಲ್ಲದ ಬಾಗೇವಾಡಿಯಲ್ಲಿ ನಡೆದ ಒಂದು ಸಭೆಯಲ್ಲಿ ಕತ್ತಿ ಸಾಹುಕಾರರು ಅತ್ಯಂತ ಸ್ಪಷ್ಟವಾಗಿ, ನಿಷ್ಠುರವಾಗಿಯೇ ಕೆ.ಎಲ್.ಇ. ಹಿತಚಿಂತಕರಾಗಿ ಹೇಳಿದ್ದರು. ವಿಶ್ವನಾಥ ಕತ್ತಿ ಅವರಿಗೆ ಅಧಿಕಾರಕ್ಕಿಂತ ಸೇವೆ ದೊಡ್ಡದಾಗಿ ಕಾಣುತ್ತಿತ್ತು. ಅಂಥ ಸೇವೆ ಮಾಡುವ ಸಾಮರ್ಥ್ಯವುಳ್ಳ ಯುವಕರು ದೊಡ್ಡವರಾಗಿ ಕಾಣುತ್ತಿದ್ದರು. ಕಂಡದ್ದನ್ನು ಕಂಡಂತೆಯೇ ಹೇಳುತ್ತಿದ್ದರು. ಇದು ಅವರ ದೊಡ್ಡ ಗುಣವಾಗಿತ್ತು.

ವಿಶ್ವನಾಥ ಕತ್ತಿ ಅವರು 1984ರಲ್ಲಿ ಸಂಸ್ಥೆಯ ಅಧ್ಯಕ್ಷರಾಗಿ ಆಯ್ಕೆಯಾದರು. ಅರಟಾಳ ರುದ್ರಗೌಡರಿಂದ ಪ್ರಾರಂಭವಾದ ಅಧ್ಯಕ್ಷ ಪದವಿಯ ಪರಂಪರೆಯಲ್ಲಿ ಇವರು ಒಂಬತ್ತನೆಯವರು. ಬೆಳಗಾವಿಯ ಕೆ.ಎಲ್.ಇ. ದಂತ ಮಹಾವಿದ್ಯಾಲಯಕ್ಕೆ ಮಂಜೂರಾತಿ ಪಡೆದರು. ಸಂಕೇಶ್ವರ, ಹುಕ್ಕೇರಿ ಭಾಗದಲ್ಲಿ ಕೆ.ಎಲ್.ಇ. ಸದಸ್ಯರ ಸಂಖ್ಯೆ ಬೆಳೆಸಿದರು. ಇನ್ನೂ ಹೆಚ್ಚಿನ ಸೇವೆ ಸಲ್ಲಿಸುವ ಉತ್ಸಾಹದಲ್ಲಿದ್ದಾಗಲೇ 1985ರಲ್ಲಿ ಹೃದಯಾಘಾತದಿಂದ ನಿಧನರಾದರು. ಇತ್ತೀಚೆಗೆ ಸನ್ಮಾನ್ಯ ಸಚಿವರಾದ ಉಮೇಶ ಕತ್ತಿ ಹಾಗು ಸಹಕಾರ ಧುರೀಣರಾದ, ಸಂಸದ ರಮೇಶ ಕತ್ತಿ ಅವರು ತಮ್ಮ ತಂದೆಯ ಸ್ಮರಣಾರ್ಥ ಕೆ.ಎಲ್.ಇ. ಸಂಸ್ಥೆಗೆ 40 ಲಕ್ಷ ರೂ. ದೇಣಿಗೆ ನೀಡಿದರು. ಇದರ ನೆನಪಿಗಾಗಿ ಸಂಸ್ಥೆಯ ದಂತ ವೈದ್ಯ ವಿಜ್ಞಾನ ಕೇಂದ್ರಕ್ಕೆ 'ವಿಶ್ವನಾಥ ಕತ್ತಿ ದಂತ ವೈದ್ಯಕೀಯ ಸಂಸ್ಥೆ' ಎಂದು ಹೆಸರಿಡಲಾಯಿತು. ಈ ನಾಮಕರಣ ಸಮಾರಂಭವು 8 ಜನವರಿ 2008 ರಂದು ಜರುಗಿತು. ಆಂಧ್ರಪ್ರದೇಶದ

ಮುಖ್ಯಮಂತ್ರಿ ಡಾ. ವೈ. ರಾಜಶೇಖರ ರೆಡ್ಡಿ ಮತ್ತು ಮಹಾರಾಷ್ಟ್ರ ರಾಜ್ಯಪಾಲ ಎಸ್.ಎಂ. ಕೃಷ್ಣ, ಕೆ.ಎಲ್.ಇ. ಸಂಸ್ಥೆಯ ಕಾರ್ಯಾಧ್ಯಕ್ಷ ಪ್ರಭಾಕರ ಕೋರೆ, ಅಧ್ಯಕ್ಷ ಶಿವಾನಂದ ಕೌಜಲಗಿ, ಶ್ರೀ ಉಮೇಶ ಕತ್ತಿ, ಶ್ರೀ ರಮೇಶ ಕತ್ತಿ ಮುಂತಾದ ಗಣ್ಯರು ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ವಿಶ್ವನಾಥ ಕತ್ತಿಯವರ ಧರ್ಮಪತ್ನಿ ಶ್ರೀಮತಿ ರಾಜೇಶ್ವರಿ ತಾಯಿ ಅವರನ್ನು ಸನ್ಮಾನಿಸಲಾಯಿತು. ಅಂತೂ ವಿಶ್ವನಾಥ ಕತ್ತಿ ಅವರ ಹೆಸರು, ಬೆಳಗಾವಿಯ ಕೆ.ಎಲ್.ಇ. ಆವರಣದಲ್ಲಿ ಅಮರವಾಯಿತು.

'ವಿಶ್ವನಾಥ ಕತ್ತಿ ದಂತವಿಜ್ಞಾನ ಮತ್ತು ಸಂಶೋಧನ ಮಹಾವಿದ್ಯಾಲಯ'ವು ಇಂದು ಕೆ.ಎಲ್.ಇ. ಸಂಸ್ಥೆಯ ಪ್ರತಿಷ್ಠಿತ ವೈದ್ಯಕೀಯ ಸೇವಾ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿದೆ. ಆರೋಗ್ಯ ಕ್ಷೇತ್ರದಲ್ಲಿ ಜಿಲ್ಲೆಯ ಜನರಿಗೆ ವರವಾಗಿ ಪರಿಣಮಿಸಿದೆ.

* * * * *

# 8

## ವಿಶ್ವನಾಥ ಕತ್ತಿ ಸಂಸದೀಯ ಪಟು

ವಿಶ್ವನಾಥ ಕತ್ತಿಯವರ ರಾಜಕೀಯ ಜೀವನ ವಿಸ್ತಾರಗೊಂಡದ್ದು. ವಿಶಾಲರೂಪ ಪಡೆದದ್ದು ಸಂಕೇಶ್ವರದ ಅಪ್ಪಣ್ಣಗೌಡ ಪಾಟೀಲರ ಗರಡಿಯಲ್ಲಿ ಆ ಕಾಲದಲ್ಲಿ ಅಪ್ಪಣ್ಣಗೌಡರು ಕಾಂಗ್ರೆಸ್ಸಿನ ಹಿರಿಯ ಮುಖಂಡರಾಗಿದ್ದರು. ಹುಕ್ಕೇರಿ–ಸಂಕೇಶ್ವರ ಭಾಗದಲ್ಲಿ ಮಾತ್ರವಲ್ಲ ಬೆಳಗಾವಿ ಜಿಲ್ಲೆಯಲ್ಲಿಯೇ ಪಕ್ಷದ ವರಿಷ್ಠ ಕಾರ್ಯಕರ್ತರಾಗಿದ್ದರು. ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರು ವಹಿಸಿದ ಪಾತ್ರ, ಅವರ ಕಾರ್ಯದಕ್ಷತೆ, ನಿಸ್ವಾರ್ಥಸೇವೆ, ಸಂಘಟನಾ ಶಕ್ತಿ, ಸಹಕಾರ ಚಟುವಟಿಕೆಗಳಿಂದಾಗಿ ಪಕ್ಷದಲ್ಲಿ ಅವರಿಗೆ ಒಳ್ಳೆಯ ಗೌರವವಿತ್ತು. ಸ್ವಾತಂತ್ರ್ಯ ದೊರೆತ ಮೇಲೆ ಕೆಲವು ವರುಷ ಅವರು ಬೆಳಗಾವಿ ಜಿಲ್ಲೆಯ ಕಾಂಗ್ರೆಸ್ ಪಕ್ಷದ ಕಾರ್ಯದರ್ಶಿಯಾಗಿ, ಆ ಮೇಲೆ ಪಕ್ಷದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರು. ಇಂತಹ ಹಿರಿಯ ಮುತ್ಸದ್ದಿ ರಾಜಕಾರಣಿ, ಸಮಾಜಸೇವಾಕಾಂಕ್ಷೆಯ ಧುರೀಣರ ಸ್ನೇಹ ವಿಶ್ವನಾಥ ಕತ್ತಿ ಅವರಿಗೆ ಲಭಿಸಿತು. 1962ರಲ್ಲಿ ಜರುಗಿದ ವಿಧಾನಸಭೆಯ ಚುನಾವಣೆಯಲ್ಲಿ ಗೌಡರು ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಸಂಕೇಶ್ವರ ಮತಕ್ಷೇತ್ರದಿಂದ ಸ್ಪರ್ಧಿಸಿದರು. ಆ ವೇಳೆಗಾಗಲೆ ಕತ್ತಿಯವರು ಅವರ ಆಪ್ತವಲಯಕ್ಕೆ ಸೇರಿದ್ದರು. ಚುನಾವಣೆಯಲ್ಲಿ ಗೌಡರು ಗೆಲ್ಲುವುದು ಸುಲಭವಿತ್ತು. ಹಾಗೆಂದು ಚುನಾವಣೆಯನ್ನು ಹಗುರಾಗಿ ಪರಿಗಣಿಸುವಂತಿಲ್ಲವೆಂದು ವಿಶ್ವನಾಥ ಕತ್ತಿಯವರು ಗೌಡರ ಜೊತೆಯಲ್ಲಿ ಮತಕ್ಷೇತ್ರದ ತುಂಬ ತಿರುಗಾಡಿದರು. ಹೋದಲ್ಲೆಲ್ಲ ಅಪ್ಪಣ್ಣಗೌಡರ ವರ್ಚಸ್ಸು, ಜನರ ಪ್ರೀತಿ ಅಭಿಮಾನವನ್ನು ಕತ್ತಿ ಸಾಹುಕಾರರು ಕಣ್ಣಾರೆ ಕಂಡು ಅನುಭವಿಸಿದರು. 'ಜನಸೇವೆ ಮಾಡಿ ಜನನಾಯಕನಾದರೆ ಅಪ್ಪಣ್ಣಗೌಡರಂತಾಗಬೇಕು' ಎಂದು ಅವರ ದಾರಿಯಲ್ಲಿಯೇ ಹೆಜ್ಜೆ ಹಾಕಿದರು. ಅಪ್ಪಣ್ಣಗೌಡರು ಚುನಾವಣೆಯಲ್ಲಿ ನಿರಾಯಾಸವಾಗಿ ಗೆದ್ದರು. ಅದರ ಮರುವರ್ಷವೇ ಕತ್ತಿ ಸಾಹುಕಾರರು 'ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ'ಗೆ ನಿರ್ದೇಶಕರಾಗಿ ಸಹಕಾರ ಸಂಘಗಳ ಕ್ಷೇತ್ರದಿಂದ ಅವಿರೋಧವಾಗಿ ಆಯ್ಕೆಯಾದರು. ಇದರಿಂದ ಅಪ್ಪಣ್ಣಗೌಡರ ಜೊತೆಗಿನ ಒಡನಾಟ ಇನ್ನಷ್ಟು ನಿಕಟವಾಯಿತು. ಗೌಡರ ಜೊತೆ ಜೊತೆಗೆ ನಿಂತು, ಸಕ್ಕರೆ ಕಾರಖಾನೆ ಮತ್ತು ಇತರ ಸಹಕಾರಿ ಸಂಘಗಳ ಅಭಿವೃದ್ಧಿಗಾಗಿ ಕೆಲಸ ಮಾಡುವಂತಾಯಿತು.

1967ರಲ್ಲಿ ಎರಡನೆಯ ಬಾರಿ ಅಪ್ಪಣ್ಣಗೌಡರು ಕಾಂಗ್ರೆಸ್ ಅಭ್ಯರ್ಥಿಯಾಗಿ ಹುಕ್ಕೇರಿ ಮತಕ್ಷೇತ್ರದಿಂದ ಆರಿಸಿ ಬಂದರು. ಈ ಚುನಾವಣೆಯಲ್ಲಿ ವಿಶ್ವನಾಥ

ಕತ್ತಿಯವರ ಪ್ರಭಾವ ಪ್ರಯತ್ನ ಚೆನ್ನಾಗಿ ಕೆಲಸ ಮಾಡಿತ್ತು. ಹುಕ್ಕೇರಿ ಮತಕ್ಷೇತ್ರದ ಅಭಿವೃದ್ಧಿಗಾಗಿ ಕನಸು ಕಾಣುತ್ತಿದ್ದ ಕೆಲವು ಹಿತಚಿಂತಕರಿಗೆ ಕತ್ತಿ ಸಾಹುಕಾರರು ಭವಿಷ್ಯದ ನಾಯಕರಾಗಿ ಗೋಚರಿಸಿದರು. ಹುಕ್ಕೇರಿ ಮತಕ್ಷೇತ್ರಕ್ಕೆ ಕ್ರಿಯಾಶೀಲ ವ್ಯಕ್ತಿತ್ವದ ನಾಯಕನ ಕೊರತೆ ಇತ್ತು. ಕತ್ತಿಯವರಿಗೆ ಸಹಕರಿಸಿದರೆ ಮತಕ್ಷೇತ್ರ ಅಭಿವೃದ್ಧಿಯಾಗುವುದೆಂಬ ಲೆಕ್ಕಾಚಾರ ಶುರುವಾಯಿತು. ಬೆಲ್ಲದಬಾಗೇವಾಡಿಯ ಬಂಡೆಪ್ಪ ಮುನ್ನೊಳ್ಳಿ, ಶ್ರೀಪಾಲಪ್ಪ ಮುನ್ನೊಳ್ಳಿ, ಹುಕ್ಕೇರಿಯ ಶ್ರೀಶೈಲಪ್ಪ ತುಬಚಿ, ಈಶ್ವರಪ್ಪ ತುಬಚಿ, ಮಹಾದೇವಪ್ಪ ತಾರಳಿ, ಬಸವಣ್ಣೆಪ್ಪ ದುಂಡಪ್ಪ ಬುರ್ಜಿ, ರವೀಂದ್ರ ಶೆಟ್ಟಿ, ಡಾ, ಮಕಾನದಾರ, ಎ.ಬಿ.ಪಾಟೀಲ ವಕೀಲರು ಇನ್ನೂ ಅನೇಕರು ಕತ್ತಿಯವರ ರಾಜಕೀಯ ವ್ಯಕ್ತಿತ್ವವನ್ನು ಉಜ್ವಲಗೊಳಿಸಲು ನಿರ್ಧರಿಸಿದರು. ಕತ್ತಿಯವರಾದರೂ ತಮ್ಮ ಸೇವೆ, ಸ್ನೇಹ, ಸಂಘಟನೆಯ ಶಕ್ತಿಯನ್ನು, ರಾಜಕೀಯ ಚಾಣಾಕ್ಷತನ, ದೂರದೃಷ್ಟಿಯನ್ನು ಜನರಿಗೆ ಪರಿಚಯಿಸಿದ್ದರು.

ಅಪ್ಪಣ್ಣಗೌಡರ ಜೊತೆ ಕೆಲಸ ಮಾಡಿದ ಅನುಭವ ಅಲ್ಲದೆ ಜನರ ನಾಡಿಮಿಡಿತ ಹಿಡಿದು ಮಾತನಾಡುವ, ಜನರ ಜೊತೆಗಿದ್ದು ಅವರ ಕಷ್ಟ ಸುಖಗಳಿಗೆ ಸ್ಪಂದಿಸುವ ಗುಣದಿಂದ ಕತ್ತಿ ಸಾಹುಕಾರರು ಆಗಲೆ ಜನಪ್ರಿಯರಾಗಿದ್ದರು. ಜನಮೆಚ್ಚುಗೆ ಗಳಿಸಿದ್ದರು. ಅಪ್ಪಣ್ಣಗೌಡರ ಜೊತೆಗೆ ಕೆಲಸ ಮಾಡುವಾಗ ಆ ಭಾಗದ ಬೆಳವಣಿಗೆಗಾಗಿ ಏನೇನು ಮಾಡಬೇಕು? ಎಂಬುದರ ಯೋಚನೆಗಳು, ಯೋಜನೆಗಳೂ ಅವರ ಮನಸ್ಸಿನಲ್ಲಿ ರೂಪುಗೊಳ್ಳತೊಡಗಿದವು. ಹಿಡಕಲ್ ಜಲಾಶಯದ ನೀರು ಬೆಲ್ಲದಬಾಗೇವಾಡಿ, ಕಬ್ಬೂರ ಗ್ರಾಮಗಳ ರೈತರಿಗೆ ದೊರೆಯಬೇಕು. ರೈತರ ಬವಣೆ ನಿಗಬೇಕು. ಕೆಲವು ಹೊಸ ಉದ್ದಿಮೆಗಳು ಪ್ರಾರಂಭವಾಗಿ ನಿರುದ್ಯೋಗದ ಸಮಸ್ಯೆ ನಿವಾರಣೆಯಾಗಬೇಕು. ಇತ್ಯಾದಿ ಯೋಜನೆಗಳನ್ನು ಸಾಕಾರಗೊಳಿಸುವುದಕ್ಕಾಗಿ ರಾಜಕೀಯ ಶಕ್ತಿಯ ಅವಶ್ಯಕತೆಯೂ ಕಂಡಿತು.

1974ರಲ್ಲಿ ಅಪ್ಪಣ್ಣಗೌಡ ಪಾಟೀಲರು ತೀರಿಕೊಂಡ ಮೇಲೆ ವಿಶ್ವನಾಥ ಸಾಹುಕಾರರು 'ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ'ಯ ಚೇರಮನ್ನರಾದರು. ಅವರಿಗೆ ಅಧಿಕಾರದ ಸೂತ್ರ ಹಿಡಿದುಕೊಳ್ಳುವುದಕ್ಕಿಂತ ಸೇವೆ ಮಾಡುವುದರಲ್ಲಿ ಅತೀವ ಸಂತೋಷವಿತ್ತು. ಒಂದು ಆಡಳಿತ ವ್ಯವಸ್ಥಿತವಾಗಿ ನಡೆದಾಗ ಅಧಿಕಾರಕ್ಕಾಗಿ ಅದನ್ನು ಕೆಡಿಸಬಾರದೆಂಬುದು ಅವರ ನಿಲುವು. ಆಡಳಿತ ವ್ಯವಸ್ಥೆಗೆ ನಮ್ಮ ಆವಶ್ಯಕತೆ ಎನಿಸಿದಾಗ ಅದರಲ್ಲಿ ಪ್ರವೇಶಿಸಬೇಕೆಂದು, ಅಧಿಕಾರ ಸೂತ್ರ ಹಿಡಿಯಬೇಕೆಂದು ಕತ್ತಿಯವರು ಹೇಳುತ್ತಿದ್ದರು. ಕುರ್ಚಿಯ ಮೇಲೆ ಯಾರು ಕುಳಿತಿದ್ದಾರೆಂಬುದು ಮಹತ್ವದ್ದಲ್ಲ. ಅಲ್ಲಿ ಕೆಲಸ ಕಾರ್ಯಗಳು ಸುಸೂತ್ರವಾಗಿ

ನಡೆದಿದೆಯೇ ಎಂಬುದು ಮಹತ್ವದ್ದೆಂದು ವಾದಿಸುತ್ತಿದ್ದರು. ಇವರ ಅವಧಿಯಲ್ಲಿ ಹಿರಣ್ಯಕೇಶಿ ಸಕ್ಕರೆ ಕಾರಖಾನೆಯು ಚೆನ್ನಾಗಿ ನಡೆಯಿತು. 'ರೈತರು, ಕಾರ್ಮಿಕರು ನಗುನಗುತಾ ಇರಬೇಕು' ಎಂದು ಸಾಹುಕಾರರು ಅವರ ಯೋಗಕ್ಷೇಮಕ್ಕಾಗಿ ಹಂಬಲಿಸುತ್ತಿದ್ದರು. ಕತ್ತಿ ಸಾಹುಕಾರರ ಅವಧಿಯಲ್ಲಿ ಕಾರ್ಮಿಕರಲ್ಲಿ ಭೇದವಿರಲಿಲ್ಲ. ಯಾವುದೇ ಪಕ್ಷಪಂಗಡಗಳ ತಾರತಮ್ಯವಿರಲಿಲ್ಲವೆಂದು ಆ ದಿನಗಳನ್ನು ಈಗಲೂ ಕೆಲವು ಹಿರಿಯರು ನೆನೆಸುತ್ತಾರೆ. ಅವರು ಚೇರಮನ್ ಆದ ವರುಷವೇ (1974) ವಿಧಾನ ಪರಿಷತ್ ಸದಸ್ಯರಾಗುವ ಯೋಗ ಬಂದಿತು. ಆಗ ವಿಶ್ವನಾಥ ಕತ್ತಿಯವರು ಸಂಸ್ಥಾ ಕಾಂಗ್ರೆಸ್ಸಿನಲ್ಲಿದ್ದರು. ಆ ಸಂದರ್ಭದಲ್ಲಿ ಚಿಕ್ಕೋಡಿ, ಗೋಕಾಕ ಮುಂತಾದ ಕಡೆಗೆ ಕಾಂಗ್ರೆಸ್(ಐ) ಶಾಸಕರಿದ್ದರು. ಒಂದರ್ಥದಲ್ಲಿ ಅನರೆದುರು ಆಡಳಿತದ ವಿರುದ್ಧ ಅಲೆ ಇತ್ತು. ಸ್ಪರ್ಧೆ ತುರಿಸಿನದಾಗಿತ್ತು, ಗೆಲುವು ಕಠಿಣವಾಗಿತ್ತು. ಆದರೆ ವಿಶ್ವನಾಥ ಕತ್ತಿಯವರ ವ್ಯಕ್ತಿತ್ವದ ಪ್ರಭಾವವೇ ಬೇರೆಯಾಗಿತ್ತು. ಸಾಹುಕಾರರದು ಕ್ರೀಡಾ ಮನೋಭಾವ, ಹಾಸ್ಯಪ್ರವೃತ್ತಿ, ನೇರ ನಡೆ-ನುಡಿಗಳು ವೈರಿಗಳ ಮನಸ್ಸನ್ನೂ ಗೆಲ್ಲುತ್ತಿದ್ದವು. ಈ ಗುಣಗ್ರಾಹಿ ವ್ಯಕ್ತಿತ್ವದಿಂದಾಗಿ ಅವರು ಸಹಕಾರಿ ಸಂಘ-ಸಂಸ್ಥೆಗಳ ಕ್ಷೇತ್ರದಿಂದ ವಿಧಾನಪರಿಷತ್ತಿಗೆ ಪ್ರಚಂಡ ಬಹುಮತದಿಂದ ಆಯ್ಕೆಯಾದರು. ಕಾಂಗ್ರೆಸ್ (ಐ)ಅಧಿಕಾರದಲ್ಲಿದ್ದಾಗ ರಾಜ್ಯದಲ್ಲಿ ಕೇವಲ ಇಬ್ಬರು ಸಂಸ್ಥಾಕಾಂಗ್ರೆಸ್‌ದಿಂದ ವಿಧಾನ ಪರಿಷತ್ ಸದಸ್ಯರಾಗಿ ಆಯ್ಕೆಯಾದರು. ಅವರಲ್ಲಿ ವಿಶ್ವನಾಥ ಕತ್ತಿಯವರು ಒಬ್ಬರು.

ಎಂ.ಎಲ್.ಸಿ. ಆಗಿ ಆಯ್ಕೆಯಾದ ಮೇಲೆ ಬೆಳಗಾವಿ ಜಿಲ್ಲೆಯ ಅಭಿವೃದ್ಧಿಗಾಗಿ ಶ್ರಮಿಸಿದರು. ಬಸವಂತರಾಯ ದೊಡ್ಡಗೌಡರ ಬೈಲಹೊಂಗಲ, ಮಹಾದೇವಪ್ಪಣ್ಣ ಮುನ್ನೊಳ್ಳಿ, ಬೋಳಶೆಟ್ಟರ, ಕಾರದಗಿ ವಕೀಲರು, ಕೆ.ಎಲ್.ಇ. ಡೈರೆಕ್ಟರ್ ಆಗಿದ್ದ ಪಿ.ಬಿ.ಪಾಟೀಲ ಮುಂತಾದವರಿಂದ ಸಲಹೆ-ಸೂಚನೆಗಳನ್ನು ಪಡೆದು ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಎಂ.ಎಲ್.ಸಿ. ಆಗಿ ಸಾಹುಕಾರರ ಸೇವಾಕ್ಷೇತ್ರ ವಿಸ್ತಾರವಾಯಿತು. ಅಧಿಕಾರದ ಹೊಣೆಗಾರಿಕೆ ಹೆಚ್ಚಿತು. ಬೆಲ್ಲದ ಬಾಗೇವಾಡಿಯ ಸಹಕಾರಿ ಚಟುವಟಿಕೆಗಳನ್ನು ನೋಡಬೇಕು. ಸಂಕೇಶ್ವರ ಸಕ್ಕರೆ ಕಾರಖಾನೆಯ ಆಡಳಿತ ನೋಡಿಕೊಳ್ಳಬೇಕು. ಜೊತೆಗೆ ಹಲವಾರು ಸಂಘ-ಸಂಸ್ಥೆಗಳ ಯೋಗಕ್ಷೇಮದ ಹೊಣೆ ಬೇರೆ. ಇದರಿಂದ ಬಿಡುವಿಲ್ಲದೆ ಸಾರ್ವಜನಕ ಕೆಲಸಗಳಲ್ಲಿ ತೊಡಗುವುದು ಅನಿವಾರ್ಯವಾಯಿತು. ಅವರಿಗೆ ಹಿಡಕಲ್ ಜಲಾಶಯದ ನೀರು ಬೆಲ್ಲದಬಾಗೇವಾಡಿ ಕಬ್ಬೂರ ಕಾಲುವೆಗಳಲ್ಲಿ ಹರಿಸಬೇಕಾಗಿತ್ತು. ಅಲ್ಲಿಯ ರೈತರ ಬವಣೆ ನೀಗಿಸಬೇಕಾಗಿತ್ತು. ಹೀಗಾಗಿ ಬೆಂಗಳೂರಿಗೆ ಹೋದಾಗಲೆಲ್ಲ ಆ ವಿಷಯ ಪ್ರಸ್ತಾಪಿಸಿ ಬರುತ್ತಿದ್ದರು. ಆಗ ನೀರಾವರಿ ಇಲಾಖೆಗೆ ಸಂಬಂಧಿಸಿದಂತೆ ರಾಜ್ಯಕ್ಕೆ ಒಬ್ಬರೇ ಒಬ್ಬರು ಮುಖ್ಯ

ಇಂಜನಿಯರ್ ಇದ್ದರು. ಅವರ ಹೆಸರು ಮುತ್ತೆಪ್ಪ ಅಂಟಿನ. ಅವರು ವಿಶ್ವನಾಥ ಕತ್ತಿ ಅವರಿಗೆ ಸಂಬಂಧಿಕರಾಗಿದ್ದರು. ಸೋದರತ್ತೆ ಪದ್ಮಾವತಿ ಅಂಗಡಿಯವರ ಮಗಳು ಸರೋಜಿಯುವರು ಮುತ್ತೆಪ್ಪನವರ ಪತ್ನಿ. ಈ ನೆಂಟಸ್ತನ ಉಪಯೋಗಿಸಿಕೊಂಡು ಕತ್ತಿ ಸಾಹುಕಾರರು ಒಂದೆರಡು ಸಲ ಇಂಜನಿಯರ್ ಅವರನ್ನು ಕರೆದುಕೊಂಡು ಬಂದರು. ಹಿಡಕಲ್ ಜಲಾಶಯ ಸುತ್ತಮುತ್ತಲಿನ ಊರುಗಳನ್ನೆಲ್ಲ ತೋರಿಸಿದರು. ರೈತರ ಹೊಲಗಳಿಗೆ ನೀರಿನ ಸೌಕರ್ಯ ಒದಗಿಸಲು ಯೋಜನೆಗಳನ್ನು ರೂಪಿಸಲು, ಅವುಗಳನ್ನು ಅನುಷ್ಠಾನಕ್ಕೆ ತರುವುದಕ್ಕೆ ಒತ್ತಾಯಿಸಿದರು. ಚೀಫ್ ಇಂಜನಿಯರ್ ಮುತ್ತೆಪ್ಪ ಅಂಟಿನ್ ಅವರು ವಿಧಾನ ಪರಿಷತ್ ಸದಸ್ಯರೂ ಮತ್ತು ಸಂಬಂಧಿಕರೂ ಆಗಿದ್ದ ವಿಶ್ವನಾಥ ಕತ್ತಿಯವರ ಪ್ರಸ್ತಾಪವನ್ನು ತಳ್ಳಿ ಹಾಕುವಂತಿರಲಿಲ್ಲ. ಅದನ್ನು ಗಂಭೀರವಾಗಿ ಪರಿಗಣಿಸಿದರು. ಅನುಷ್ಠಾನಕ್ಕೆ ಕ್ರಿಯಾಯೋಜನೆಯನ್ನೂ ರೂಪಿಸಿದರು. ಆದರೆ ಯೋಜನೆಯು ಮಂದಗತಿಯಲ್ಲಿ ಸಾಗುತ್ತ 1986ರಲ್ಲಿ ಕಾಲುವೆಯಲ್ಲಿ ನೀರು ಹರಿಯಿತು. ಆಗ ಯೋಜನೆ ರೂಪಿಸಿ ಅದರ ಅನುಷ್ಠಾನಕ್ಕೆ ಹಗಲಿರುಳು ಶ್ರಮಿಸಿದ ವಿಶ್ವನಾಥ ಅವರು ಇರಲಿಲ್ಲ. ಅವರ ಹಿರಿಯ ಮಗ ಮಾನ್ಯ ಉಮೇಶ ಕತ್ತಿಯವರಿದ್ದರು. ಅವರು ಶಾಸಕರಾಗಿದ್ದರು. ತಂದೆಯ ಕಾರ್ಯವನ್ನು ಮುಂದುವರಿಸಿದ ಇವರು ನಿಜವಾದ ವಾರಸುದಾರರೆನಿಸಿದರು.

ಬಿಡುವಿಲ್ಲದ ಓಡಾಟದಿಂದ ವಿಶ್ವನಾಥ ಕತ್ತಿ ಸಾಹುಕಾರರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮವಾಯಿತು. ಒಂದು ಸಲ ಲಘು ಹೃದಯಾಘಾತದಿಂದ ಸಾಹುಕಾರರು ಬಳಲಿದರು. ಆಗ ವೈದ್ಯರು ತೆರೆದ ಹೃದಯ ಚಿಕಿತ್ಸೆಗಾಗಿ ಸಲಹೆ ನೀಡಿದರು. ಒಂದಿಷ್ಟು ಉಪಚಾರ, ವಿಶ್ರಾಂತಿಯ ನಂತರ ಮತ್ತೆ ಚೇತರಿಸಿಕೊಂಡರು. ಮತ್ತೆ ಸಾರ್ವಜನಿಕ ಸೇವೆಗೆ ನಿಂತರು. ಆಗಿನ ಕಾಲದಲ್ಲಿ ತೆರೆದ ಹೃದಯ ಚಿಕಿತ್ಸೆಗಾಗಿ ಮುಂಬಯಿಯಂಥ ನಗರಗಳಿಗೆ ಇಲ್ಲವೆ ಅಮೇರಿಕೆಯಂಥ ದೇಶಕ್ಕೆ ಹೋಗಬೇಕಾಗಿತ್ತು. ಕೆಲಸದ ಒತ್ತಡದಲ್ಲಿ ಅವರು ದೂರದ ನಗರ, ದೇಶಗಳಿಗೆ ಹೋಗಲಿಲ್ಲ. ಸಕಾಲದಲ್ಲಿ ಶಸ್ತ್ರಕ್ರಿಯೆ ಮಾಡಿಸಿಕೊಳ್ಳಲಿಲ್ಲ.

ವಿಶ್ವನಾಥ ಕತ್ತಿ ಸಾಹುಕಾರರಿಗೆ 240 ಎಕರೆ ಜಮೀನು ಇತ್ತು. ಅಷ್ಟೊಂದು ಜಮೀನಿನಲ್ಲಿ ಬೆಳೆಯುತ್ತಿದ್ದ ಬೆಳೆ ಮಾತ್ರ ಅತ್ಯಂತ ಕಡಿಮೆ. ಹೆಚ್ಚೆಂದರೆ ವರುಷಕ್ಕೆ ಹತ್ತು ಚೀಲ ಕುಸುಬಿ, ಇಪ್ಪತ್ತು ಚೀಲ ತಂಬಾಕು, ಇಪ್ಪತ್ತು ಚೀಲ ಜೋಳ. ಕಾರಣ ಮಳೆ ಅವಲಂಬಿತ ಬೆಳೆ. ಮಳೆ ಬಂದರೆ ಬೆಳೆ, ಇಲ್ಲದಿದ್ದರೆ ಇಲ್ಲ. ಈ ಪರಿಸ್ಥಿತಿ ಬೆಲ್ಲದಬಾಗೇವಾಡಿ ಮತ್ತು ಸುತ್ತಮುತ್ತಲಿನ ಹಳ್ಳಿಯ ರೈತರದೂ ಆಗಿತ್ತು. ಅದಕ್ಕಾಗಿಯೇ

ನೀರಾವರಿ ಯೋಜನೆಗೆ ಸಾಹುಕಾರರು ವಿಶೇಷ ಆದ್ಯತೆ ನೀಡಿದರು. ಹಿಡಕಲ್ ಜಲಾಶಯದ ನೀರು ತರಲು ತುಂಬ ಪ್ರಯತ್ನಪಟ್ಟರು. 1986ರಲ್ಲಿ ಕ್ಯಾನಲ್‌ನಲ್ಲಿ ನೀರು ಬಂತು. ಈಗ ಬೆಲ್ಲದಬಾಗೇವಾಡಿ ರೈತರು ತರತರದ ಬೆಳೆಗಳನ್ನು ಬೆಳೆದು ಪ್ರಗತಿಶೀಲ ರೈತರೆನಿಸಿದ್ದಾರೆ. ಸಾಹುಕಾರರು ಎಂ.ಎಲ್.ಸಿ. ಅವಧಿಯಲ್ಲಿ ಹುಕ್ಕೇರಿ ಭಾಗದ ಅಭಿವೃದ್ಧಿಗೆ ತುಂಬ ಪರಿಶ್ರಮ ಪಟ್ಟರು. ಹಲವಾರು ಉದ್ದಿಮೆಗಳು ಪ್ರಾರಂಭವಾಗಲು ಕಾರಣರಾದರು. ಇವರ ಪ್ರಭಾವ, ಸೇವಾಭಾವಕ್ಕೆ ಸಚಿವ ಸ್ಥಾನ ಒಲಿದು ಬಂದಿತ್ತು. ಆದರೆ ಅದನ್ನು ಬೇರೆಯವರಿಗೆ ಬಿಟ್ಟುಕೊಟ್ಟರು. ಸಾಹುಕಾರರಿಗೆ ಅಧಿಕಾರಕ್ಕಿಂತ ಸೇವೆ ಬಹಳ ಪ್ರಿಯವಾಗಿತ್ತು. ಸೇವೆಯಲ್ಲಿ ಅವರಿಗೆ ಸಂತೋಷವಿತ್ತು. ಜನರ ನೆಮ್ಮದಿಯಲ್ಲಿ ಅವರಿಗೆ ಧನ್ಯತೆ ಇತ್ತು. ಅವರದು ಪರೋಪಕಾರ ವ್ಯಕ್ತಿತ್ವವಾಗಿತ್ತು.

1984ರಲ್ಲಿ ವಿಧಾನಸಭೆ ಚುನಾವಣೆಗಳು ಬಂದವು. ಸಾಹುಕಾರರು ಸ್ಪರ್ಧಿಸಿದರು. ಎಂ.ಎಲ್.ಸಿ. ಅವಧಿಯಲ್ಲಿ ಅವರು ಮಾಡಿದ ಕೆಲಸ ಕಾರ್ಯಗಳು ಅವರೇ ಸ್ಪರ್ಧಿಸಲು ಪ್ರೇರಣೆ ನೀಡಿದವು. ರಾಮಕೃಷ್ಣ ಹೆಗಡೆಯವರು ಮೌಲ್ಯಾಧಾರಿತ ಸರಕಾರದ ಭರವಸೆ ಕೊಟ್ಟಿದ್ದರು. ಎಲ್ಲೆಡೆಗೂ ಜನತಾ ಪಕ್ಷದ ಗಾಳಿ ಬೀಸುತ್ತಿತ್ತು. ಹೆಗಡೆಯವರಿಗೂ ವಿಶ್ವನಾಥ ಕತ್ತಿ ಸಾಹುಕಾರರಿಗೂ ಆತ್ಮೀಯ ಸಂಬಂಧವಿತ್ತು. ಕೆಲವು ಜನ ಹಿತೈಷಿಗಳು ಸಾಹುಕಾರರಿಗೆ 'ಚುನಾವಣೆಗೆ ನಿಲ್ಲುವುದು ಬೇಡ' ಎಂದು ಹೇಳಿದರು. ಅದಕ್ಕೆ ಕಾರಣ ಅವರ ಅನಾರೋಗ್ಯ. ಸಾಹುಕಾರರು ಯಾರ ಮಾತನ್ನು ಕೇಳಲಿಲ್ಲ. ಶಾಸಕರಾಗಿ ಆರಿಸಿ ಬರುವುದರಲ್ಲಿ ಸಂಶಯವಿಲ್ಲವೆಂಬ ಆತ್ಮವಿಶ್ವಾಸ ಅವರದಾಗಿತ್ತು. ಆರಿಸಿ ಬಂದು ಜನಸೇವೆಗೆ ಮತ್ತೊಂದು ಅವಕಾಶ ಪಡೆಯುವುದೆಂಬ ಲೆಕ್ಕಾಚಾರವಿತ್ತು. ಹುಕ್ಕೇರಿಯ ಹೊನ್ನಪ್ಪಜ್ಜ ನೂಲಿ ಒಂದೆರಡು ಬಾರಿ ಶಾಸಕರಾಗಿ ಆರಿಸಿ ಬಂದಿದ್ದರು. ಮತ್ತೆ ಸ್ಪರ್ಧಿಸಲು ಪ್ರಯತ್ನ ನಡೆಸಿದ್ದರು. ಆದರೆ ಅವರಿಗೆ ವಯಸ್ಸಾಗಿತ್ತು. ಅದಕ್ಕಾಗಿಯೇ ವಿಶ್ವನಾಥ ಕತ್ತಿ ಸಾಹುಕಾರರು 'ಈ ವಯಸ್ಸಿನಾಗ ಎದಕ ಸಾಯಕ ಇಲೆಕ್ಶನ್ ನಿಲ್ಲತಿ? ಸುಮ್ಮನ ನಮ್ಮಂಥವರಿಗೆ ಪ್ರೋತ್ಸಾಹ ನೀಡು' ಎಂದು ಆತ್ಮೀಯ ಸಲುಗೆಯಿಂದ ನಗುನಗುತ್ತ ಹೇಳಿದರು. ಮತ್ತು ಚುನಾವಣೆಗೆ ಸ್ಪರ್ಧಿಸಿಯೇ ಬಿಟ್ಟರು. ಸಾಹುಕಾರರ ವಿರುದ್ಧ ಕರಗುಪ್ಪಿಯ ಬಾಳಾಸಾಹೇಬ ಪಾಟೀಲರು ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದ್ದರು. ಕತ್ತಿ ಸಾಹುಕಾರರ ಪ್ರಭಾವ ಪ್ರಸಿದ್ಧಿ ಎದುರು ಕರಗುಪ್ಪಿ ಗೌಡರು ಸೆಣಸಾಡಬೇಕಾಯಿತು. ಕೊನೆಗೂ ವಿಶ್ವನಾಥ ಕತ್ತಿ ಸಾಹುಕಾರರು ಅಂದಾಜು ಹನ್ನೆರಡು ಸಾವಿರ ಮತಗಳ ಅಂತರದಿಂದ ಗೆದ್ದರು. ಅವರ ಕನಸು ನನಸಾಯಿತು. ಶಾಸಕರಾಗಿ ಆರಿಸಿ ಬಂದರು. ಗೆಲುವಿಗೆ ಕಾರಣರಾದ ಮತದಾರರಿಗೆ ಮನದುಂಬಿ ಕೃತಜ್ಞತೆಗಳನ್ನು ಸಲ್ಲಿಸಿದರು. ರಾಜ್ಯದಲ್ಲಿ

ಜನತಾಪಕ್ಷ ಜಯಭೇರಿ ಸಾಧಿಸಿತು. ಆತ್ಮೀಯ ಗೆಳೆಯರಾಗಿದ್ದ ರಾಮಕೃಷ್ಣ ಹೆಗಡೆಯವರ ನೇತೃತ್ವದಲ್ಲಿ ಸರಕಾರ ರಚಿಸುವ ಸಿದ್ಧತೆಗಳು ನಡೆದವು. ಮೇ 18 ರಿಂದ ಅಧಿವೇಶನ ಆರಂಭವಾಯಿತು. ಸಾಹುಕಾರರು ಪ್ರಮಾಣ ವಚನ ಸ್ವೀಕರಿಸಲು ಬೆಂಗಳೂರಿಗೆ ಧಾವಿಸಿದರು. ಅವರ ಅಭಿಮಾನಿ ಬಳಗ ಅವರನ್ನು ಸಂಭ್ರಮದಿಂದ ಬೆಲ್ಲದ ಬಾಗೇವಾಡಿಯಿಂದ ಬೀಳ್ಕೊಟ್ಟಿತು. ಸಾಹುಕಾರರು ತುಂಬ ಉತ್ಸಾಹದಿಂದ ಎರಡು ದಿನ ಅಧಿವೇಶನದಲ್ಲಿ ಪಾಲ್ಗೊಂಡರು. ಪ್ರತಿಯೊಂದು ಚಟುವಟಿಕೆಗಳಿಗೆ ಸಾಕ್ಷಿಯಾದರು. ಮೂರನೆಯ ದಿನ ಅಧಿವೇಶನ ಆರಂಭವಾಯಿತು. ಸಭೆಯಲ್ಲಿ ಚರ್ಚೆ ಬಿಸಿಯೇರುತ್ತಿರುವಾಗಲೇ ಎಂದೆಂದೂ ನಿರೀಕ್ಷಿಸದ ಘಟನೆಯೊಂದು ಸಂಭವಿಸಿತು. ದುರ್ವಿಧಿ ವಿಶ್ವನಾಥ ಕತ್ತಿಯವರ ಹೃದಯದ ಮೇಲೆ ಬಲವಾದ ಆಘಾತ ಮಾಡಿತು.

* * * * *

## ಅಡಿಟಿಪ್ಪಣಿ

1. ಸಂದರ್ಶನ : ಮೃಣಾಲಿನಿತಾಯಿ ಅಂಗಡಿ. ಸ್ಥಳ–ಬೆಳಗಾವಿ. ದಿನಾಂಕ 5.3.2007
2. 'ನನ್ನ ಜೀವನ ಚರಿತ್ರೆ' (ರಾವನಹಾದ್ದೂರ ಷಣ್ಮುಖಪ್ಪ ಅಂಗಡಿ) ಮುನ್ನುಡಿ ಮಾತು. ಪ್ರ, ಕೆ.ಎಲ್.ಇ. ಸಂಸ್ಥೆ, ಬೆಳಗಾವಿ, 2008
3. ಸಂದರ್ಶನ: ಗುರವ (ವಿಶ್ವನಾಥ ಕತ್ತಿಯವರ ಸಹಪಾಠಿ) ಸ್ಥಳ–ಬೆಳಗಾವಿ ದಿನಾಂಕ: 25.2.2007
4. ಸಂದರ್ಶನ: ಮೃಣಾಲಿನಿತಾಯಿ ಅಂಗಡಿ. ಸ್ಥಳ–ಬೆಳಗಾವಿ. ದಿನಾಂಕ 5.3.2007
5. ಸಂದರ್ಶನ: ಪೂರ್ಣಿಮಾ ಪಾಂಗಿ. ಸ್ಥಳ: ಬೆಳಗಾವಿ. ದಿನಾಂಕ: 18.10.2008
6. ಸಂದರ್ಶನ: ಪೂರ್ಣಿಮಾ ಪಾಂಗಿ. ಸ್ಥಳ: ಬೆಳಗಾವಿ. ದಿನಾಂಕ: 18.10.2008
7. ಸಂದರ್ಶನ: ರಮೇಶ ಕತ್ತಿ. ಸ್ಥಳ: ಬೆಲ್ಲದ ಬಾಗೇವಾಡಿ. ದಿನಾಂಕ: 25.10.2008
8. ಸಂದರ್ಶನ: ಜಯಸಿಂಗ ರಜಪೂತ. ಸ್ಥಳ–ಸಂಕೇಶ್ವರ. ದಿನಾಂಕ: 7.10.2007
9. ಸಂದರ್ಶನ: ವ್ಹಿ.ಎಂ. ಪಟ್ಟೇದ. ಸ್ಥಳ: ಬೆಳಗಾವಿ. ದಿನಾಂಕ: 10.10.2009

## 9

# ನೆನಪು ನಂದಾದೀಪ ಸದನದಲ್ಲಿ ಸಂತಾಪ

20 ಮಾರ್ಚ್, 1985– ಅಂದು ರಾಮಕೃಷ್ಣ ಹೆಗಡೆಯವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದ ಜನತಾ ಸರಕಾರ ಮೂರನೆಯ ದಿನಕ್ಕೆ ಕಾಲಿಟ್ಟ ದಿನ. ಅಧಿವೇಶನದ ಮೂರನೆಯ ದಿನ ವಿಧಾನಸಭೆಯಲ್ಲಿ ಶಾಸಕರು, ಸಚಿವರು ತಮ್ಮ ತಮ್ಮ ಆಸನಗಳಲ್ಲಿ ಕುಳಿತಿದ್ದಾರೆ. 9 ಗಂಟೆಗೆ ಸಭೆ ಆರಂಭವಾಗಿದೆ. ಕಾರವಾರದ ಶಾಸಕ ಆರ್.ಎಸ್. ನಾಯಕ ಅವರು ತಮ್ಮ ಮೇಲಾದ ಹಲ್ಲೆಯ ಬಗೆಗೆ ಪ್ರಸ್ತಾಪಿಸಿ, ತಮಗೆ ಜೀವಭಯ ಒಡ್ಡಿದ ಗೂಂಡಾಗಳಿಗೆ ಶಿಕ್ಷೆಯಾಗಬೇಕು ಎಂದು ಒತ್ತಾಯಿಸುತ್ತಿದ್ದಾರೆ. ಗೃಹಸಚಿವರಾದ ಬಿ. ರಾಚಯ್ಯನವರು ಜೀವಕ್ಕೆ ಅಪಾಯವಾಗದ ಹಾಗೆ ಪೋಲೀಸ್ ಭದ್ರತೆ ಒದಗಿಸುವುದಾಗಿ ಭರವಸೆ ನೀಡಿದರು. ಎಸ್. ಬಂಗಾರಪ್ಪನವರು 'ಎಲ್ಲವೂ ಗೊತ್ತಿದ್ದು ಗೊತ್ತಿಲ್ಲದವರಂತೆ ವರ್ತಿಸುವ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳುತ್ತೀರಿ?' ಎಂದು ಸಚಿವರಿಗೆ ಪ್ರಶ್ನಿಸಿದರು.

ಈ ಮಧ್ಯೆ ಶಾಸಕ ಬಸವರಾಜ ಪಾಟೀಲರು 'ಸರ್ಕಾರಿ ಖಜಾನೆಗಳಲ್ಲಿ ಸರಕಾರಿ ನೌಕರರ ಸಂಬಳದ ಹೊರತು ಯಾವ ಬಿಲ್ಲುಗಳೂ ಪಾಸ್ ಆಗುತ್ತಿಲ್ಲ' ಎಂದು ಆಕ್ಷೇಪಿಸಿ ಚರ್ಚೆಯ ಗತಿ ಬದಲಾಯಿಸಿದರು. ಅದಕ್ಕೆ ಮುಖ್ಯಮಂತ್ರಿಗಳು 'ಬಜೆಟ್ ಚರ್ಚೆಯಲ್ಲಿ ಈ ಬಗೆಗೆ ಮಾತನಾಡೋಣ' ಎಂದು ಸಮಜಾಯಿಷಿ ನೀಡಿದರು. ಅಷ್ಟರಲ್ಲಿ ಗುಲಬರ್ಗಾ ಭಾಗದಲ್ಲಿ ಸುಟ್ಟ ಮನೆಗಳ ಪರಿಹಾರ ಧನ ಬೇಗನೆ ಬಿಡುಗಡೆ ಮಾಡಬೇಕೆಂದು, ಆ ಬಗೆಗೆ ಮುಖ್ಯಮಂತ್ರಿಗಳು ಹೇಳಿಕೆ ಕೊಡಬೇಕೆಂದು ಕೆ.ಎಚ್.ಪಾಟೀಲ ಅವರು, ಎಸ್. ಬಂಗಾರಪ್ಪನವರು ಆಗ್ರಹಿಸತೊಡಗಿದರು. ಚರ್ಚೆ ಬಿಸಿಯೇರುತ್ತಿದ್ದಂತೆ ಒಮ್ಮೆಲೆ ಸದನದಲ್ಲಿ ಡಾಕ್ಟರ್...ಡಾಕ್ಟರ್...ಎಂಬ ಕೂಗು ಎದ್ದಿತು. ಕೂಡಲೇ ಎಲ್ಲರ ಗಮನ ಆ ಕಡೆಗೆ. ನೋಡು ನೋಡುವಷ್ಟರಲ್ಲಿ ಹುಕ್ಕೇರಿಯ ಜನಪ್ರಿಯ ಶಾಸಕ ವಿಶ್ವನಾಥ ಕತ್ತಿ ಅವರು ಹೃದಯಾಘಾತದಿಂದ ಕುಳಿತಲ್ಲಿಯೇ ಕುಸಿದಿದ್ದರು. ತಕ್ಷಣ ಸದನವನ್ನು 10 ನಿಮಿಷಗಳ ಕಾಲ ಮುಂದೂಡಿ, ಅವರನ್ನು ಆಸ್ಪತ್ರೆಗೆ ಕಳಿಸುವ ಏರ್ಪಾಡು ಮಾಡಿದರು. ಆಗ ಸಮಯ 10 ಗಂಟೆಯಾಗಿತ್ತು. ಕೆಲ ನಿಮಿಷಗಳಲ್ಲಿಯೇ ಅವರು ಕೊನೆಯುಸಿರೆಳೆದ ಸುದ್ದಿ ತಿಳಿಯಿತು. ಸದನ ಶೋಕ ವ್ಯಾಕುಲದಲ್ಲಿ ಮುಳುಗಿತು. 10 ನಿಮಿಷದ ಹಿಂದೆ ಇದ್ದು, ಸದನದ ಕಾರ್ಯಕಲಾಪದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಶಾಸಕರೊಬ್ಬರು ಹೀಗೆ ಏಕಾಏಕಿ ಎದ್ದು ಹೋದುದು ಎಲ್ಲರನ್ನು ದುಃಖಕ್ಕೆ ಗುರಿ ಮಾಡಿತು.

ಸದನದ ಸಭೆ ಪುನಃ 11 ಗಂಟೆಗೆ ಸಮಾವೇಶಗೊಂಡಿತು. ಅಗಲಿದ ಸದಸ್ಯನಿಗೆ ಅಪಾರ ಶೋಕ ವ್ಯಕ್ತಪಡಿಸಿತು.

**ಶ್ರೀ ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿಗಳು)**

ಮಾನ್ಯ ಅಧ್ಯಕ್ಷರೇ, ಇದಂತೂ ಒಂದು ಕಲ್ಪನಾತೀತವಾದ ಘಟನೆಯಾಗಿದೆ. ಈ ಸದನದಲ್ಲಿ ನಮ್ಮೆಲ್ಲರ ಹಾಗೆ ಕಾರ್ಯಕಲಾಪಗಳಲ್ಲಿ ಭಾಗವಹಿಸಲಿಕ್ಕೆ ಬಂದಂತಹ ನನ್ನ ಮಿತ್ರರು ಮತ್ತು ಮಾನ್ಯ ಶಾಸಕರಾದ ಶ್ರೀ ವಿಶ್ವನಾಥ ಕತ್ತಿಯವರು ಈಗ ಇಲ್ಲವಾಗಿದ್ದಾರೆ. ನಮ್ಮ ಜೀವ ಎಷ್ಟರ ಮಟ್ಟಿಗೆ ನಶ್ವರವಾದುದು ಎಂದು ಅರ್ಥವಾಗುತ್ತದೆ. ನಾವು ದೊಡ್ಡ ದೊಡ್ಡ ಕನಸು ಕಾಣುತ್ತಿರುತ್ತೇವೆ. ಇವರ ನಿಧನದಿಂದ ನನಗೆ ಅತೀವ ದುಃಖವಾಗಿದೆ. ಕೇವಲ ನನಗೆ ಸ್ನೇಹಿತರಾಗಿದ್ದರು ಎನ್ನತಕ್ಕ ದೃಷ್ಟಿಯಿಂದಲ್ಲ ಅವರು ಅತ್ಯಂತ ಮೃದು ಸ್ವಭಾವದವರು ಮತ್ತು ಪ್ರೇಮ ಸ್ವಭಾವದವರು. ಅವರು ಅನೇಕ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಸಹಕಾರೀ ಕ್ಷೇತ್ರ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಕರ್ನಾಟಕ ಲಿಬರಲ್ ಎಜ್ಯುಕೇಶನ್ ಸೊಸೈಟಿಯಲ್ಲಿ ಅಧ್ಯಕ್ಷರಾಗಿ ಉತ್ತಮ ಕೆಲಸ ಮಾಡಿದ್ದಾರೆ. ಸಂಕೇಶ್ವರ ಸಹಕಾರ ಸಕ್ಕರೆ ಕಾರ್ಖಾನೆಯ ಜೊತೆಯಲ್ಲಿ ಅನೇಕ ವರ್ಷಗಳ ಕಾಲ ಸಂಬಂಧ ಇದೆ. ಮತ್ತು ವಿಧಾನ ಪರಿಷತ್ತಿನ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಈ ಸಲದ ಚುನಾವಣೆಯಲ್ಲಿ ಹುಕ್ಕೇರಿಯಿಂದ ಆರಿಸಿ ಬಂದು ಈ ಸಭೆಯ ಶಾಸಕರಾಗಿ ಮೂರು ದಿವಸ ಕೂಡ ಭಾಗವಹಿಸಲಿಕ್ಕೆ ಸಾಧ್ಯವಾಗಲಿಲ್ಲ. ನಮ್ಮೆಲ್ಲರ ಅಶ್ರುತರ್ಪಣ ಅವರ ಮನೆಯವರಿಗೆ ಮತ್ತು ಸಂಬಂಧಿಕರಿಗೆ ಹಾಗೂ ಇನ್ನಿತರ ಸ್ನೇಹಿತರಿಗೆ ಹೋಗುತ್ತದೆ. ಅವರ ನಿಧನದಿಂದ ಆದಂತಹ ಹಾನಿಯಲ್ಲಿ ನಷ್ಟದಲ್ಲಿ ನಾವು ಭಾಗಿಯಾಗಿದ್ದೇವೆ. ಅಂತಹವರನ್ನು ನಾವು ಪುನಃ ಪಡೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಅವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಕೊಡಲಿ ಮತ್ತು ಅವರ ನಿಧನದಿಂದ ಉಂಟಾಗುವ ದುಃಖವನ್ನು ಸಹಿಸತಕ್ಕ ಶಕ್ತಿಯನ್ನು ಅವರ ಮನೆಯವರಿಗೆ ಕೊಡಲಿ ಎಂದು ಹೇಳಿ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಕೆ.ಎಚ್. ಪಾಟೀಲ**–ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ವಿಶ್ವನಾಥ ಕತ್ತಿಯವರ ಪರಿಚಯ ನನಗೆ ಬಹಳ ದಿವಸಗಳಿಂದ ಇತ್ತು. ಕರ್ನಾಟಕ ಲಿಬರಲ್ ಎಜ್ಯುಕೇಶನ್ ಸೊಸೈಟಿಯ ಅಧ್ಯಕ್ಷರಾಗಿದ್ದು ಅನೇಕ ಸಹಕಾರಿ ಕ್ಷೇತ್ರದಲ್ಲಿ ದುಡಿದಿದ್ದಾರೆ. ಇವರ ಸಾವಿನಿಂದ ನಾವು ಅಪಾರ ನಷ್ಟವನ್ನು ಅನುಭವಿಸಬೇಕಾಗಿದೆ. ಮಾನ್ಯ ನಾಯಕರು ಹೇಳಿದ ಹಾಗೆ ಅವರು ಸಾವು ತತ್‌ಕ್ಷಣ ಉಂಟಾಗಿರುವುದರಿಂದ ಇದೊಂದು ಆಶ್ಚರ್ಯಕರವಾಗಿದೆ. ದೇವರು ಒಳ್ಳೆಯವರನ್ನು ಬೇಗ ಕರೆದುಕೊಳ್ಳುತ್ತಾನೆ ಎನ್ನುವುದಕ್ಕೆ

ಇದು ಸಾಕ್ಷಿಯಾಗಿದೆ. ಅವರ ಕುಟುಂಬಕ್ಕೆ ಉಂಟಾಗಿರುವ ದುಃಖವನ್ನು ಸಹಿಸತಕ್ಕ ಶಕ್ತಿಯನ್ನು ಭಗವಂತನು ಕೊಡಲಿ ಎಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಸಭಾಧ್ಯಕ್ಷರು–"ಈ ದಿನ ಬೆಳಿಗ್ಗೆ ಶ್ರೀಮಾನ್ ವಿಶ್ವನಾಥ ಕತ್ತಿಯವರು ನಮ್ಮ ಜೊತೆಗೆ ಈ ಸದನದಲ್ಲಿದ್ದರು. ಅದೇ ಸಮಯದಲ್ಲಿ ಅವರು ತೀವ್ರ ಅಸ್ವಸ್ಥರು ಎಂದು ಕಂಡುಬಂದಿದ್ದರಿಂದ ಅವರನ್ನು ಶೀಘ್ರವಾಗಿ ಆಸ್ಪತ್ರೆಗೆ ಒಯ್ಯಲಾಯಿತು. ಅಲ್ಲಿ ಅವರ ಪ್ರಾಣಪಕ್ಷಿ ಹಾರಿಹೋಯಿತು. ಅವರು ನಮ್ಮನ್ನು ಅಗಲಿ ಹೋಗಿದ್ದಾರೆ. ವಿಶ್ವನಾಥ ಕತ್ತಿಯವರು ಸುಮಾರು 25–30 ವರ್ಷಗಳ ಕಾಲ ಬೆಳಗಾವಿ ಜಿಲ್ಲೆಯಲ್ಲಿ ಹಾಗು ರಾಜ್ಯದ ಹಲವಾರು ಸಹಕಾರಿ ಕ್ಷೇತ್ರಗಳಲ್ಲಿ, ವಿದ್ಯಾ ಕ್ಷೇತ್ರಗಳಲ್ಲಿ ಮತ್ತು ಇನ್ನಿತರ ಸಾಮಾಜಿಕ ಕ್ಷೇತ್ರಗಳಲ್ಲಿ ಅವರು ಪರಿಣಿತರಾಗಿದ್ದರು. ಅವರೊಬ್ಬ ಉಚ್ಚಮಟ್ಟದ ಸಾರ್ವಜನಕ ಧುರೀಣರಾಗಿದ್ದರು. ಇಂತಹ ಒಬ್ಬ ಮಹಾನ್ ವ್ಯಕ್ತಿ ಇವೊತ್ತಿನ ದಿವಸ ನಮ್ಮನ್ನು ಅಗಲಿ ಹೋಗಿದ್ದಾರೆ. ಈ ದಿನ ಸದನದಲ್ಲಿ ನಮ್ಮೆಲ್ಲರ ಮಧ್ಯೆ ಇದ್ದು, ಕೆಲವೇ ಘಂಟೆಗಳಲ್ಲಿ ನಮ್ಮನ್ನು ಅಗಲಿದುದು ವಿಧಿಯ ಕೈವಾಡ ಎನಿಸುತ್ತದೆ. ಅವರ ನಿಧನದಿಂದ ಅವರ ಕುಟುಂಬದವರಿಗೆ ಆದ ದುಃಖದಲ್ಲಿ ನಾವು ಭಾಗಿಗಳಾಗಿದ್ದು ದಿವಂಗತರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ಅನುಗ್ರಹಿಸಲಿ ಎಂದು ನಾನು ಪ್ರಾರ್ಥಿಸುತ್ತೇನೆ. ಅವರ ನಿಧನದ ಬಗ್ಗೆ ಸಂತಾಪ ಸೂಚಿಸಲು ಸಭೆಯು ಒಂದು ನಿಮಿಷ ಕಾಲ ಎದ್ದು ನಿಂತು ಮೌನ ಆಚರಿಸಬೇಕೆಂದು ಕೋರುತ್ತೇನೆ."

ಸದನ ಅಗಲಿದ ಶಾಸಕ ವಿಶ್ವನಾಥ ಕತ್ತಿ ಅವರ ನಿಧನಕ್ಕೆ ಕಂಬಿನಿ ಮಿಡಿಯಿತು. ಸಭೆ ಮರುದಿನಕ್ಕೆ ಮುಂದೂಡಲಾಯಿತು.

ಇತ್ತ ಆಕಾಶವಾಣಿ, ದೂರದರ್ಶನಗಳಲ್ಲಿ ಬಿತ್ತರವಾದ ಸುದ್ದಿಯಿಂದ ನಾಡಿನ ಜನತೆಗೆ ದಿಗ್ಭ್ರಮೆ, ಶೋಕ. ಶಾಸಕರೊಬ್ಬರು ಸದನದ ಸಭೆಯಲ್ಲಿ ಪಾಲ್ಗೊಂಡು ಹೀಗೆ ಏಕಾಏಕಿ ಎಲ್ಲರಿಂದ ದೂರ ಸರಿದು ಬಿಡಬಹುದೆಂದು ಯಾರೂ ಊಹೆ ಮಾಡಿರಲಿಲ್ಲ. ಬೆಳಗಾವಿ ಹುಕ್ಕೇರಿ–ಸಂಕೇಶ್ವರ ಭಾಗದ ಜನರಿಗಂತೂ ಈ ಸುದ್ದಿ ಆಘಾತವನ್ನುಂಟು ಮಾಡಿತು. ಬೆಲ್ಲದಬಾಗೇವಾಡಿಯ ಜನರ, ಕುಟುಂಬದ ಸದಸ್ಯರ, ಬಂಧುಬಳಗದವರ ದುಃಖ ಕಟ್ಟೆ ಒಡೆಯಿತು. ನಾಲ್ಕು–ಐದು ದಿನಗಳ ಹಿಂದೆಯಷ್ಟೇ ಶಾಸಕರಾಗಿ ಆಯ್ಕೆಯಾಗಿದ್ದರು. ಅಧಿವೇಶನದಲ್ಲಿ ಪಾಲ್ಗೊಂಡು ಬರುವುದಾಗಿ ಹೇಳಿ ಹೋಗಿದ್ದರು. ಆದರೆ ಅವರ ಪಾರ್ಥಿವ ಶರೀರ ಬರುತ್ತಿರುವುದನ್ನು ತಿಳಿದು ಎಲ್ಲರ ದುಃಖ ಉಮ್ಮಳಿಸಿತು. ಪಾರ್ಥಿವ ಶರೀರ ಬೆಂಗಳೂರಿನಿಂದ

ಬೆಲ್ಲದ ಬಾಗೇವಾಡಿಗೆ ಬರಲು ತುಂಬ ತಡವಾಯಿತು. ದಾರಿ ಮಧ್ಯೆದಲ್ಲಿ ಜನರು ಗುಂಪು ಗುಂಪಾಗಿ ಬಂದು ಶ್ರದ್ಧಾಂಜಲಿ ಸಲ್ಲಿಸುತ್ತಿದ್ದರು. ಹುಕ್ಕೇರಿ ಸಂಕೇಶ್ವರ ಭಾಗದ ಜನರು ತಮ್ಮ ಪ್ರೀತಿಯ ನಾಯಕನ ಅಂತಿಮ ದರ್ಶನಕ್ಕಾಗಿ ಮಹಾಪೂರದಂತೆ ಹರಿದು ಬಂದರು. ಎಲ್ಲರ ಬಾಯಲ್ಲಿ 'ಸರಳ ನಡೆ, ನುಡಿ, ಸಜ್ಜನಿಕೆಗೆ ಹೆಸರಾದ ಸಾಹುಕಾರ' ಎಂಬ ಗುಣಗಾನ. ಹುಕ್ಕೇರಿಯ ಕ್ಷೇತ್ರದ ಅಭ್ಯುದಯಕ್ಕಾಗಿ ಪರಿಶ್ರಮಪಟ್ಟ ಪ್ರಭಾವೀ ನಾಯಕ. ಸಹಕಾರಿ ರಂಗದ ಧೀಮಂತ ನಾಯಕ. ಇನ್ನಷ್ಟು ಕಾಲ ಬದುಕಬೇಕಾಗಿತ್ತೆನ್ನುವ ಭಾವೋದ್ವೇಗದಲ್ಲಿ, ಸಕಲ ಸರಕಾರಿ ಮರ್ಯಾದೆಗಳಿಂದ ತೋಟದಲ್ಲಿ ಅಂತಿಮ ಸಂಸ್ಕಾರ ನೆರವೇರಿತು.

ಕುಟುಂಬವತ್ಸಲ, ಸ್ನೇಹಜೀವಿ, ಸೇವಾಜೀವಿ, ಜನಪರ ಸೇವೆಯ ಜನನಾಯಕ, ಸಹಕಾರರಂಗದ ಧೀಮಂತ ನಾಯಕ, ಜನಪ್ರಿಯ ಶಾಸಕ ವಿಶ್ವನಾಥ ಕತ್ತಿ ಸಾಹುಕಾರ ತೆರೆಯ ಮರೆಗೆ ಸರಿದರು. ಕಾಯಕ ನಿರತ ವ್ಯಕ್ತಿಯು ದಣಿದು, ಬೆವರು ಒರೆಸಲು ಎದ್ದು ಹೋದಂತೆ, ವಿರಮಿಸಲು ನಿದ್ದೆಗೆ ಸರಿದಂತೆ ಇತ್ತು ಅವರ ಸಾವು, ಸಾಹುಕಾರರ ಸೇವೆ, ಉಪಕಾರ ತಾವೆಂದೂ ಮರೆಯುವುದಿಲ್ಲವೆಂದು ಜನ ಮರಗುತ್ತ ಅಗಲಿದ ನಾಯಕನಿಗೆ ಶ್ರದ್ಧಾಂಜಲಿ ಸಲ್ಲಿಸಿದರು.

* * * * *

‘ಜೀವನದಾಗ ಗಳಿಸೇನು, ಗಳಿಸೇನು ಅಂದ್ರ ಏನ್ರಿ?
ಮಂದೀನ ಗಳಿಸಬೇಕು.
ಮಂದೀನ ಗಳಿಸೋದು ದೊಡ್ಡದು’.

– ಶ್ರೀ ವಿಶ್ವನಾಥ ಕತ್ತಿ

## 1

**ಪರಮಪೂಜ್ಯ ಜಗದ್ಗುರು ಪಂಚಮ ಶಿವಲಿಂಗೇಶ್ವರ ಮಹಾಸ್ವಾಮಿಗಳು**
ದುರದುಂಡೀಶ್ವರ ಸಿದ್ಧಸಂಸ್ಥಾನಮಠ
ನಡಸೋಸಿ

ಶರಣ ಪರಂಪರೆಯ ಬಳಿವಿಡಿದು ಬಂದ ವಿಶ್ವನಾಥ ಕತ್ತಿಯವರು ಸದ್ವಂಶಸಂಜಾತರೂ. ಸದಾಚಾರ ಸದ್ವಿಚಾರ ಸಂಪನ್ನರೂ, ಸತ್ಯಸಂಧರೂ, ಸದ್ವಿದ್ಯಾವಿಭೂಷಿತರೂ ಆಗಿದ್ದರು. ರಾಜಕಾರಣದ ಮಧ್ಯದಲ್ಲಿಯೂ ಧರ್ಮ--ಸಂಸ್ಕೃತಿ–ಸಾಹಿತ್ಯದ ಬಗ್ಗೆ ಅಪಾರ ಒಲವು ಉಳ್ಳವರಾಗಿದ್ದ ವಿಶ್ವನಾಥ ಕತ್ತಿಯವರು ಗಡಿಭಾಗದ ಚೈತನ್ಯಶಕ್ತಿಯಾಗಿದ್ದರು. ಬಸವಾದಿ ಪ್ರಮಥರ ತತ್ವಗಳಲ್ಲಿ ನಿಷ್ಠೆಯುಳ್ಳವರೂ ಆಗಿದ್ದರು. ಕಾಯಕ–ದಾಸೋಹ ತತ್ವಗಳನ್ನು ಅಕ್ಷರಶಃ ತಮ್ಮ ಬದುಕಿನಲ್ಲಿ ಅನುಷ್ಠಾನಗೊಳಿಸಿದ ಶ್ರೀಯುತರ ಬದುಕು ಅನುಕರಣೀಯವಾಗಿತ್ತು.

ಗಡಿಭಾಗದ ಸಂಕೇಶ್ವರದಲ್ಲಿ ಸಹಕಾರಿ ಸಕ್ಕರೆ ಕಾರ್ಖಾನೆ ಏಳ್ಗೆಯಾಗುವಲ್ಲಿ ವಿಶ್ವನಾಥ ಕತ್ತಿಯವರ ಸೇವೆ ಅಪಾರವಾದುದು. ಈ ಭಾಗದ ರೈತರಿಗೆ ಆರ್ಥಿಕವಾಗಿ ಸಬಲರಾಗುವಲ್ಲಿ ಕಾರ್ಖಾನೆ ತುಂಬ ಸಹಕಾರಿಯಾಯಿತು. ಕಾರ್ಖಾನೆಯ ಲಾಭದ ಹಣವನ್ನು ಶ್ರೀಮಠಕ್ಕೆ ಸಲ್ಲಿಸಿದರು. ಆ ಹಣದಿಂದ ಇಲ್ಲಿ ಪ್ರಾಥಮಿಕ ಶಾಲೆಯಿಂದ ತಾಂತ್ರಿಕ ಮಹಾವಿದ್ಯಾಲಯದವರೆಗೆ ಬೃಹತ್ ಶಿಕ್ಷಣ ಸಂಸ್ಥೆಯ ಸಮುಚ್ಚಯ ನಿರ್ಮಾಣವಾಯಿತು.

## 2

**ಪರಮಪೂಜ್ಯ ಸಿದ್ಧರಾಮ ಮಹಾಸ್ವಾಮಿಗಳು**
ನಾಗನೂರು ರುದ್ರಾಕ್ಷಿಮಠ
ಬೆಳಗಾವಿ

ವಿಶ್ವನಾಥ ಕತ್ತಿಯವರು ಆತ್ಮಕಲ್ಯಾಣ ಹಾಗು ಸಮಾಜಕಲ್ಯಾಣಗಳೆರಡನ್ನು ಸಾಧಿಸಿದ ಪುಣ್ಯಪುರುಷರು. ತಮ್ಮ ಸಮಸ್ತ ಬದುಕನ್ನು ಜನಪರವಾಗಿಸಿ, ಜನತೆಯ ಆಶೋತ್ತರಗಳಿಗೆ ಸ್ಪಂದಿಸಿದವರು. ಸಾಮಾನ್ಯರ ನೋವು ನಲಿವುಗಳಿಗೆ ಸಾಂತ್ವನದ ಸಿಂಚನಗೈದವರು. ರಾಜಕಾರಣ ಮತ್ತು ಸಮಾಜ ಕಾರಣಗಳಲ್ಲಿ ಪರಿಶುದ್ಧತೆಯನ್ನು ಕಾಯ್ದುಕೊಂಡವರು. ಮಾಡುವಂತಿರಬೇಕು ಮಾಡದಂತಿರಬೇಕು ಎನ್ನುವ ಶರಣತತ್ವಕ್ಕೆ ಅನುಗುಣವಾಗಿತ್ತು ಅವರ ಜೀವನ. ವ್ಯಕ್ತಿಗಳ ಗುಣವನ್ನು ಗುರುತಿಸಿ ಗೌರವಿಸುವ ಅವರು ನ್ಯಾಯನಿಷ್ಠುರಿಯಾಗಿದ್ದರು. ಯಾರ ಬಗ್ಗೆಯೂ ಅವರಲ್ಲಿ ರಾಗದ್ವೇಷವಾಗಲಿ,

ಪೂರ್ವಾಗ್ರಹಗಳಾಗಲಿ ಇರಲಿಲ್ಲ. ಗುರುನಿಷ್ಠೆಯುಳ್ಳ ವಿಶ್ವನಾಥ ಕತ್ತಿಯವರು ಮಿತಭಾಷಿಗಳು, ಅಪೂರ್ವ ಜ್ಞಾನಶೀಲರೂ, ಅನುಪಮ ಚಿಂತಕರೂ ಆಗಿದ್ದರು. ಅವರಿಂದ ಬೆಳಗಾವಿ ಜಿಲ್ಲೆಯ ಗಡಿನಾಡು ಸಹಕಾರ ರಂಗದಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸುವಂತಾಯಿತು.

3

**ಪರಮಪೂಜ್ಯ ಅಲ್ಲಮಪ್ರಭು ಮಹಾಸ್ವಾಮಿಗಳು**
ಸಿದ್ಧಸಂಸ್ಥಾನಮಠ
ಚಿಂಚಣಿ

ವಿಶ್ವನಾಥ ಕತ್ತಿಯವರು ಗಡಿಭಾಗದಲ್ಲಿ ಕನ್ನಡಪರ ವಾತಾವರಣ ಮೂಡಿಸುವಲ್ಲಿ ಅನೇಕ ಯೋಜನೆಗಳನ್ನು ರೂಪಿಸಿದವರು. ಸಂಘ-ಸಂಸ್ಥೆಗಳ ಅಧ್ಯಕ್ಷರಾಗಿ, ಶಾಸಕರಾಗಿ ಜನಾನುರಾಗಿಗಳಾಗಿದ್ದ ವಿಶ್ವನಾಥ ಕತ್ತಿಯವರು ಜನಸಾಮಾನ್ಯರ ಹೃದಯ ಸಿಂಹಾಸನದಲ್ಲಿ ಶಾಶ್ವತ ಸ್ಥಾನ ಪಡೆದಿದ್ದರು. ಈ ಭಾಗದ ಹಿರಿಯ ರಾಜಕಾರಣಿಯಾಗಿದ್ದ ಅವರ ಲೋಕಾನುಭವ ಅದ್ಭುತವಾಗಿತ್ತು. "ಮಾಡಬಲ್ಲವರು ಮಾಡುತ್ತಾರೆ; ಮಾಡಲರಿಯದವರು ಬರೀ ಹೇಳುತ್ತಾರೆ" ಎಂಬುದೊಂದು ಪ್ರಸಿದ್ಧ ಉಕ್ತಿ. ವಿಶ್ವನಾಥ ಕತ್ತಿಯವರು ಮಾಡಬಲ್ಲವರಾಗಿದ್ದರು. ಹೇಳದೆ ಮಾಡುವುದು ಅವರ ರೂಢಿಯಾಗಿತ್ತು. ಹೀಗಾಗಿ ಅವರು ಹೆಚ್ಚು ಮಾತನಾಡಲಿಲ್ಲ, ಕೆಲಸ ಮಾಡಿ ತೋರಿಸಿದವರು.

4

**ಪರಮಪೂಜ್ಯ ಪ್ರಭುಚನ್ನಬಸವ ಮಹಾಸ್ವಾಮಿಗಳು**
ಜಂಗಮಲಿಂಗ ಸುಕ್ಷೇತ್ರ ಮೋಟಗಿಮಠ
ಅಥಣಿ

ನಾಡಿನ ಸರ್ವತೋಮುಖ ಏಳ್ಗೆಗಾಗಿ ಸರ್ವಾರ್ಪಣ ಮನೋಭಾವದಿಂದ ದುಡಿದ ಕೆಲವೇ ಕೆಲವು ರಾಜಕಾರಣಿಗಳಲ್ಲಿ ವಿಶ್ವನಾಥ ಕತ್ತಿಯವರ ಹೆಸರು ಅಜರಾಮರ. ಸ್ವಾರ್ಥ-ಮೋಸ-ವಂಚನೆಗಳನ್ನು ಮೀರಿದ ನಿಸ್ವಾರ್ಥ-ನಿರಪೇಕ್ಷ ಸೇವಾ ಮನೋಭಾವವುಳ್ಳವರಾಗಿದ್ದ ವಿಶ್ವನಾಥ ಕತ್ತಿಯವರು ರಾಜಕಾರಣದಂತೆಯೇ ಸಾಹಿತ್ಯ ಕ್ಷೇತ್ರವನ್ನೂ ಪ್ರೀತಿಸುತ್ತಿದ್ದರು...ಅವರ ಓದಿನ ವಿಸ್ತಾರ ಸಾಗರವ್ಯಾಪ್ತಿಯಾಗಿತ್ತು. ಸಾಮಾಜಿಕ ಕಳಕಳಿ, ದೈವಭಕ್ತಿ, ಜೀವನದೃಷ್ಟಿ, ದೀನ-ದಲಿತರ ಬಗೆಗಿನ ಕಾಳಜಿ ಅವರ ವ್ಯಕ್ತಿತ್ವದ ಹೊಳಹುಗಳಾಗಿದ್ದವು.

ಮಣಿಹದಿಹ ಮನವೊಂದು ಸಾಧಿಸುವ ಹಟವೊಂದು ।
ನಜದ ನೇರಕೆ ನಡೆವ ನಿಶ್ಚಲತೆಯೊಂದು ।
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು।
ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆಯೊಂದು ॥

ಎಂಬ ಕವಿವಾಣಿಗೆ ನಿದರ್ಶನವಾಗಿ ಬದುಕಿದವರು ವಿಶ್ವನಾಥ ಕತ್ತಿಯವರು.

5

ಪರಮಪೂಜ್ಯ ಸಂಪಾದನಾ ಮಹಾಸ್ವಾಮಿಗಳು
ಚರಮೂರ್ತಿ ಸಂಪಾದನಾಮಠ
ಚಿಕ್ಕೋಡಿ

ಚಿಕ್ಕೋಡಿ ಮತಕ್ಷೇತ್ರದ ಜನಪ್ರಿಯ ಸಂಸದರಾಗಿರುವ ಶ್ರೀ ರಮೇಶ ಕತ್ತಿಯವರ ತಂದೆಯವರಾದ ವಿಶ್ವನಾಥ ಕತ್ತಿಯವರು ಜನಾನುರಾಗಿ ನಾಯಕರಾಗಿದ್ದರು. ಅನೇಕ ಸಂಘ–ಸಂಸ್ಥೆಗಳಲ್ಲಿ ಅವಿರೋಧವಾಗಿ ಆಯ್ಕೆಯಾಗುವ ಸಾಮರ್ಥ್ಯ ಹೊಂದಿದ ವಿಶ್ವನಾಥ ಕತ್ತಿಯವರು ಅಜಾತ ಶತ್ರುಗಳಾಗಿದ್ದರು.

'ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ;
ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ,
ಭಾವದಲ್ಲಿ ದಿಗಂಬರ,
ಜ್ಞಾನದಲ್ಲಿ ಪರಮಾನಂದವೆಡೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರಲಿಂಗವು ಬೇರಿಲ್ಲ ಕಾಣಿರೋ'

ಎಂಬ ಶರಣ ಆದಯ್ಯನ ವಚನ ವಾಣಿಗೆ ಅಕ್ಷರಶಃ ಸಾಕ್ಷಿಯಾಗಿ ಬದುಕಿದವರು ವಿಶ್ವನಾಥ ಸಾಹುಕಾರರು.

6

ಡಾ. ಪ್ರಭಾಕರ ಕೋರೆ
ರಾಜ್ಯಸಭಾ ಸದಸ್ಯರು, ಮತ್ತು ಕಾರ್ಯಾಧ್ಯಕ್ಷರು,
ಕೆ.ಎಲ್.ಇ. ಸಂಸ್ಥೆ, ಬೆಳಗಾವಿ

ವಿಶ್ವನಾಥ ಕತ್ತಿಯವರು ನಮ್ಮ ದಿನಮಾನದ ಅಪರೂಪದ ಪ್ರಾಮಾಣಿಕ ರಾಜಕಾರಣಿಗಳಾಗಿದ್ದರು. ನಮ್ಮ ಕೆ.ಎಲ್.ಇ. ಸಂಸ್ಥೆಯ ಬೆಳವಣಿಗೆಯಲ್ಲಿಯೂ ಅವರ ಕೊಡುಗೆ ಅಪಾರವಾಗಿದೆ. ಕೆ.ಎಲ್.ಇ. ಸಂಸ್ಥೆಯ ಆಡಳಿತ ಮಂಡಳಿಯ ಚುನಾವಣೆ ನಡೆದಾಗ ಅಧ್ಯಕ್ಷ ಸ್ಥಾನಕ್ಕೆ ವಿಶ್ವನಾಥ ಕತ್ತಿಯವರು ಸ್ಪರ್ಧಿಸಿದ್ದರು. ಎದುರಾಳಿಯನ್ನು ಸೋಲಿಸಿ ಪ್ರಚಂಡ ಬಹುಮತದಿಂದ ಆಯ್ಕೆಯಾದರು. ಅವರ ನಿರಾಡಂಬರ ಜೀವನ ನಮಗೆ ಆದರ್ಶವಾಗಿತ್ತು. ಅವರ ಮಕ್ಕಳಾದ ಮಾನ್ಯ ಉಮೇಶ ಮತ್ತು ರಮೇಶ ಇಂದು ರಾಜಕೀಯ ಕ್ಷೇತ್ರದಲ್ಲಿ ಬೆಳೆದು ನಿಂತಿದ್ದಾರೆ. ಅವರ ಸೇವೆ-ತ್ಯಾಗ ಮುಂದಿನ ಪೀಳಿಗೆಯೂ ನೆನಪಿನಲ್ಲಿಟ್ಟುಕೊಳ್ಳಲಿ ಎಂಬ ಸದುದ್ದೇಶದಿಂದ ಕೆ.ಎಲ್.ಇ. ಸಂಸ್ಥೆಯ ದಂತ ವಿಜ್ಞಾನ ಮಹಾವಿದ್ಯಾಲಯಕ್ಕೆ ಅವರ ಹೆಸರನ್ನು ನಾಮಕರಣ ಮಾಡಲಾಗಿದೆ.

ವಿಶ್ವನಾಥ ಕತ್ತಿಯವರ ಲೋಕಹಿತದ ಕಾರ್ಯಗಳು ಜನಮನದಲ್ಲಿ ಶಾಶ್ವತವಾಗಿ ಉಳಿದಿರುವುದು ಅವರ ಸಾರ್ಥಕ ಬದುಕಿನ ಲಕ್ಷಣವಾಗಿದೆ.

**"ಶರೀರ ನಿರಪೇಕ್ಷಸ್ಯ ದಕ್ಷಸ್ಯ ವ್ಯವಸಾಯಿನಃ ।**
**ನ್ಯಾಯೇನಾರಬ್ಧ ಕರ್ಮಸ್ಯ ನ ಕಿಂಚಿದಪಿ ದುಷ್ಕರಂ ॥**

"ಶಾರೀರಿಕ ಶ್ರಮದ ಅರಿವಿಲ್ಲದೆ, ದಕ್ಷತೆಯಿಂದ ಜನಕಲ್ಯಾಣ ಕಾರ್ಯ ಮಾಡುವ ವ್ಯಕ್ತಿಗೆ ಯಾವುದೂ ಅಸಾಧ್ಯವಲ್ಲ" ಎಂಬ ಉಕ್ತಿಯಂತೆ ವಿಶ್ವನಾಥ ಕತ್ತಿಯವರು ಅಸಾಧ್ಯವಾದುದನ್ನು ಸಾಧಿಸಿ ತೋರಿಸಿದರು.

**7**

**ಶ್ರೀ ಸುರೇಶ ಅಂಗಡಿ**
ಲೋಕಸಭಾ ಸದಸ್ಯರು
ಬೆಳಗಾವಿ

ವಿಶ್ವನಾಥ ಕತ್ತಿಯವರು ಬೆಳಗಾವಿ ಜಿಲ್ಲೆಯ ಹಿರಿಯ ರಾಜಕೀಯ ಧುರೀಣರು. ಸಕ್ಕರೆ ಕಾರ್ಖಾನೆ, ಸಹಕಾರಿ ಬ್ಯಾಂಕ, ಕೆ.ಎಲ್.ಇ. ಸಂಸ್ಥೆಗಳ ಅಧ್ಯಕ್ಷ-ಉಪಾಧ್ಯಕ್ಷರಾಗಿ ಮಾಡಿದ ಕಾರ್ಯ ಅನುಪಮ. ಬಡವರ-ದೀನರ,

ದನಿಯಿಲ್ಲದವರ ಶಕ್ತಿಯಾಗಿ, ಅವರ ಬಾಳಿನ ಅಭ್ಯುದಯಕ್ಕಾಗಿ ತಮ್ಮ ಸಮಸ್ತ ಬದುಕನ್ನು ಮುಡುಪಿಟ್ಟ ವಿಶ್ವನಾಥ ಕತ್ತಿಯವರು ಸತ್ಯ-ನ್ಯಾಯ-ಪ್ರಾಮಾಣಿಕೆಗಳಿಗೆ ಅನ್ವರ್ಥಕವಾಗಿ ಬದುಕಿದವರು. ಇಂಥ ಹಿರಿಯರ ಕಾಲಘಟ್ಟದಲ್ಲಿ ನಾವು ಬದುಕಿದ್ದೇವು ಎಂಬುದೇ ನಮ್ಮ ಭಾಗ್ಯ. ಅವರ ರಾಜಕಾರಣ ಸೇವೆ ಸದಾಕಾಲ ಉಳಿಯುವಂತಹದ್ದು.

ಲೋಕದಲ್ಲಿ ವೃಕ್ಷಗಳು ಪರೋಪಕಾರಕ್ಕಾಗಿಯೇ ಹಣ್ಣುಗಳನ್ನು ಕೊಡುತ್ತವೆ. ಪರೋಪಕಾರಕ್ಕಾಗಿಯೇ ನದಿಗಳು ಹರಿಯುತ್ತವೆ. ಪರೋಪಕಾರಕ್ಕಾಗಿಯೇ ಹಸುಗಳು ಹಾಲನ್ನು ಕರೆಯುತ್ತವೆ. ಅಂತೆಯೇ ಪರೋಪಕಾರಕ್ಕಾಗಿಯೇ ಈ ಬದುಕು 'ಪರೋಪಕಾರರ್ಥಮಿದಂ ಶರೀರಂ' ಎಂಬ ಸುಭಾಷಿತ ಮಾತಿಗೆ ವ್ಯಾಖ್ಯಾನವಾಗಿ ಬದುಕಿದವರು ವಿಶ್ವನಾಥ ಕತ್ತಿಯವರು.

## 8

**ಡಾ. ಸರಜೂ ಕಾಟ್ಕರ್**
ಹಿರಿಯ ಸಾಹಿತಿ ಮತ್ತು ಪತ್ರಕರ್ತರು
ಬೆಳಗಾವಿ

ವಿಶ್ವನಾಥ ಕತ್ತಿಯವರು ಅಪ್ಪಣ್ಣಗೌಡ ಪಾಟೀಲರು ಕೂಡಿ ಹುಕ್ಕೇರಿ ತಾಲೂಕಿನ ಸಮಗ್ರ ಅಭಿವೃದ್ಧಿಗೆ ಕಾರಣರಾದವರು. ಇಬ್ಬರೂ ಹಿರಿಯರ ನಿಸ್ವಾರ್ಥ ಸೇವೆ ಜನಮನದಲ್ಲಿ ಚಿರಕಾಲ ಉಳಿಯುವಂತಹದ್ದು. ಬಹುಮುಖ ಪ್ರತಿಭೆಯುಳ್ಳ ವಿಶ್ವನಾಥ ಕತ್ತಿಯವರು ರಾಜಕೀಯ-ಸಾಮಾಜಿಕ-ಸಹಕಾರ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಅನನ್ಯವಾದುದು. ಎಲ್ಲ ರಂಗಗಳಲ್ಲಿಯೂ ಧೈರ್ಯದಿಂದ ಮುನ್ನುಗ್ಗುವ ಸ್ವಭಾವದವರಾಗಿದ್ದ ವಿಶ್ವನಾಥ ಅವರು ಧೀಮಂತ ರಾಜಕಾರಣಿಯಾಗಿದ್ದರು. ಅವರಲ್ಲಿ ಹೊಸದ್ದನ್ನು ಸೃಷ್ಟಿಸುವ ಮಾಂತ್ರಿಕ ಶಕ್ತಿ ಇತ್ತು., ಅಗಾಧ ಕಾರ್ಯಗಳನ್ನು ನಿರ್ವಹಿಸುವ ಸಾಮರ್ಥ್ಯವಿತ್ತು.

* * * * *

## ಮಿಂಚಿ ಮರೆಯಾದ ನಕ್ಷತ್ರ

ಯಾರು ಹೇಳಿದರು ನಿನಗೆ ! ನಾವು ನಿನ್ನ ಮರೆತೆವೆಂದು
ಮರೆತಿಲ್ಲ! ಮರೆಯುವುದು ಇಲ್ಲ
ಕೆತ್ತಿ ನಿಲ್ಲಿಸಿದೆವು ! ನಿನ್ನ ಪುತ್ಥಳಿಯನಿಂದು ।ಪ।

ವಿಶ್ವನಾಥ ಎಂದು ! ತಂದೆ ತಾಯಿಗಳಿಟ್ಟ ಹೆಸರು
ಸಾರ್ಥಕವಾಯ್ತು ! ನಿನ್ನ ಜೀವನದ ಉಸಿರು
'ಸೋಲರಿಯದ ಸರದಾರ'ನೆಂದು ಕರೆದಾರು। 1

ಸಹಕಾರ ಕ್ಷೇತ್ರದಲ್ಲಿ ! ನೀ ಮಾಡಿದೆ ಕೃಷಿ
ಫಲ ಕೊಟ್ಟಿಹುದು ! ನಮಗೆಲ್ಲ ಖುಷಿ
ಸಾಕಾರಗೊಳಿಸುವೆವು ! ನಿನ್ನ ಕನಸುಗಳನ್ನು॥ 2

ಗೌಡರಿಬ್ಬರ ರಾಜಕೀಯ ಗರಡಿಯಲ್ಲಿ
ಗರ್ಜಿಸಿದೆ 'ಸಿಂಹ' ಗರ್ಜನೆಯಲ್ಲಿ
ವಿಜಯ ಪತಾಕೆ ಹಾರಿಸಿದೆ ಎಲ್ಲ ಕ್ಷೇತ್ರಗಳಲ್ಲಿ। 3

ಹುಟ್ಟಿದವನು ಸಾಯಲೇಬೇಕು ! ಇದು ಶತಸಿದ್ಧ!
ನೀ ಪಡೆದ ಸಾವು ಅಂತಿಂಥಹದಲ್ಲ ! ಅಮರತ್ವ ಬದ್ಧ
ಸತ್ತು ಬದುಕಿದೆ ನೀನು! ಜೀವನದ ಉದ್ದ॥ 4

ಪ್ರತಿಜ್ಞೆಗೈಯ್ಯುವೆವು ! ನಾವೆಲ್ಲ ಇಂದು
ಉಳಿದ ಕನಸುಗಳನ್ನು! ಸಾಕಾರಗೊಳಿಸುತ್ತೇವೆಂದು
ನೀ ನಡೆದು ಬಂದ ದಾರಿಯಲ್ಲಿ ! ಸಾಗುವೆವು ಮುಂದು। 5

ಅಯ್ಯಾ ಎಂದರೆ ಸ್ವರ್ಗವಂತೆ ! ಎಲವೊ ಎಂದರೆ ನರಕವಂತೆ
ಎಂಬ ಅಣ್ಣ ಬಸವಣ್ಣನ ! ನುಡಿ ಮುತ್ತಿನಂತೆ
ಯಾರಿಗೂ ಕೇಡನು ಬಯಸದೆ ! ಬದುಕಿದಿರಿ ನೀವು। 6

ತ್ಯಾಗ ಮಾಡಿದೆ ಅಂದು । ಮಂತ್ರಿಯಾಗುವ ಯೋಗ
ಯಾರು ಬಿಡುವರು ಹೇಳು ! ಬಂದಂಥ ಸುಯೋಗ
ಗಯ್ಯಾಳಿ ರಾಜಕಾರಣದಲ್ಲಿಯೂ ! ಗರತಿಯ ತ್ಯಾಗ 7

ನಿನ್ನ ಅಗಲಿಕೆ ! ತುಂಬಲಾರದ ನಷ್ಟ
ನೀ ಬೆಳೆಸಿದ ಸಂಘ-ಸಂಸ್ಥೆಗಳಿಗೆ ! ಇದು ಸ್ಪಷ್ಟ
ನಿನ್ನಾಶೀರ್ವಾದವೇ ನಮಗೆ ! ಒಲಿದ ಅದೃಷ್ಟ 7

ಬಲ್ಲಿದನಾಗಿ ಜನಿಸಿದೆ ! ಬಡವರ ಬಂಧು ಎನಿಸಿದೆ
ಹದ್ದಾಗಿ ಬಾಳದೆ ! ಹುಲಿಯಾಗಿ ಬದುಕಿದೆ
ಇಂದು ಕೂಡಿದ ಜನಸ್ತೋಮವೇ! ನಿನ್ನ ಜನಪ್ರಿಯತೆಗೆ ಸಾಕ್ಷಿ* 8

–ಬಸವರಾಜ ಕತ್ತಿ

* ಬೆಲ್ಲದ ಬಾಗೇವಾಡಿಯ ಅರ್ಬನ್ ಸೌಹಾರ್ದ ಸಹಕಾರಿ ಬ್ಯಾಂಕ್ ಆವರಣದಲ್ಲಿ ವಿಶ್ವನಾಥ ಕತ್ತಿಯವರ ಕಂಚಿನ ಮುತ್ಥಳಿ ಅನಾವರಣ ಸಂದರ್ಭದಲ್ಲಿ ಬರೆದ ಕವನ

ಅನುಬಂಧ – II

## ವಿಜಯದಿ ಮೆರೆದ ವಿಶ್ವನಾಥ ಕತ್ತಿ

ಸಗ್ಗದಿಂದಿಳಿದು ಬಾ
ಸಾಧನೆಯ ನೋಡ ಬಾ
ಸಂತಸದ ನಮನಗಳ ಸ್ವೀಕರಿಸು ಬಾ ||ಪ||

ಶ್ರಮಿಕರ ಬಾಳಿನ ಸರದಾರ
ಸಹಕಾರ ಕ್ಷೇತ್ರದ ಸಾಹುಕಾರ
ಸಕ್ಕರೆ ಕಾರ್ಖಾನೆ ಸುಧಾರಕ ||1||

ಬಾಗೇವಾಡಿಯ ಭಾಗ್ಯವಿದಾತನೆ
ಕತ್ತಿ ಮನೆತನದ ಶ್ರೇಷ್ಠ ಸುಪುತ್ರನೆ
ವಿಜಯದಿ ಮೆರೆದ ವಿಶ್ವನಾಥನೆ ||2||

ಉಮೇಶ–ರಮೇಶ ನಿನ್ನಯ ಪುತ್ರರು
ಬಾಗೇವಾಡಿಯ ಜನಕೆ ಹೃದಯದ ಮಿತ್ರರು
ರಾಮ–ಲಕ್ಷ್ಮಣರೆಂದು ಹೆಸರು ಪಡೆದಿಹರು ||3||

ನೀ ನೆಟ್ಟ ವೃಕ್ಷ ಹೆಮ್ಮರವಾಗಿ
ದಾರಿ ಹೋಕರಿಗೆಲ್ಲ ತಂಪು ನೆರಳಾಗಿ
ಹಣ್ಣು ಕೊಟ್ಟಿಹುದು ಜನಕೆ ಸಿಹಿಯಾಗಿ ||4||

ನಿನ್ನ ಆದರ್ಶವೇ ನಮ್ಮದಾಗಿಹುದು
ನಿನ್ನ ತತ್ವದಲಿ ಜನ ಸಾಗಿಹುದು
ನಿನ್ನ ಕನಸೆಲ್ಲ ನನಸಾಗುತಿಹುದು ||5||

ಬಾಗೇವಾಡಿಗೆ ಬಹದ್ದೂರ ನೀನು
ಸಹೃದಯರಿಗೆ ಸ್ನೇಹಮಯಿ ನೀನು
ವಿರೋಧಿಗಳಿಗೆ ಸಿಂಹಸ್ವಪ್ನ ನೀನು ||6||

ರಾಜಕಾರಣದಲ್ಲಿ ಹೆಸರು ಪಡೆದಿದ್ದೆ
ವಿಧಾನ ಸಭೆಯ ಶಾಸಕನಾಗಿದ್ದೆ
ಸಭೆಯಲ್ಲಿ ವಿಧಿಗೆ ವಶವಾಗಿದ್ದೆ ||7||

ಬ್ಯಾಂಕಿನ ಆವರಣದೊಳು ಪುತ್ಥಳಿಯನಿಟ್ಟು
ನಿನ್ನ ಅಭಿಮಾನಿಗಳು ಸಂತೋಷಪಟ್ಟು
ಸ್ಮರಣೆಗೈದಿಹರು ಗೌರವ ಕೊಟ್ಟು ॥8॥

ಇಂದು ರಾಜಕಾರಣದ ಸನ್ಮಾನ್ಯರೆಲ್ಲರೂ
'ಪುತ್ಥಳಿ' ಅನಾವರಣಕ್ಕೆಂದು ಆಗಮಿಸಿಹರು
ನಿಡಸೋಸಿ ಮಠದ ಶ್ರೀಗಳವರು ಹಾರೈಸಿಹರು* ॥9॥

—ಟಿ. ಸಿ. ಮೊಹರೆ

* ಬೆಲ್ಲದ ಬಾಗೇವಾಡಿಯ ಅರ್ಬನ್ ಸೌಹಾರ್ದ ಸಹಕಾರಿ ಬ್ಯಾಂಕ್ ಆವರಣದಲ್ಲಿ ವಿಶ್ವನಾಥ ಕತ್ತಿಯವರ ಕಂಚಿನ ಪುತ್ಥಳಿ ಅನಾವರಣ ಸಂದರ್ಭದಲ್ಲಿ ಬರೆದ ಕವನ

ಅನುಬಂಧ – III

# ವಿಶ್ವನಾಥ ಮಲ್ಲಪ್ಪ ಕತ್ತಿ

ಬೆಳಗಾವಿ ಜಿಲ್ಲೆಯ ಸಹಕಾರ ಆಂದೋಲನ ಇತಿಹಾಸವನ್ನು ಬರೆಯುವಾಗ ಬೆಲ್ಲದ ಬಾಗೇವಾಡಿ ಗ್ರಾಮದಿಂದಲೇ ಶ್ರೀಕಾರ ಹಾಕಬೇಕಾಗುತ್ತದೆ ಎಂಬ ಸಂಗತಿ ಬಹುಜನರಿಗೆ ಗೊತ್ತಿರಲಿಕ್ಕಿಲ್ಲ. 1904ರ ಸಹಕಾರ ಕಾನೂನಿನನ್ವಯ ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಬೆಲ್ಲದ ಬಾಗೇವಾಡಿ ಗ್ರಾಮದಲ್ಲಿ ಪ್ರಪ್ರಥಮ ಸಹಕಾರ ಸಂಘವು 1905ರಲ್ಲಿ ಸ್ಥಾಪಿಸಲ್ಪಟ್ಟಿತು. ಅದೇ ಈಗ ವ್ಯವಸಾಯ ಸೇವಾ ಸಹಕಾರಿ ಸಂಘ ಎಂಬ ನಾಮಕರಣದಿಂದ ದೊಡ್ಡ ಸಂಘವಾಗಿ ಕೋಟ್ಯಂತರ ರೂಪಾಯಿ ವ್ಯವಹಾರ ಮಾಡುತ್ತಿದೆ.

ಬೆಲ್ಲದ ಬಾಗೇವಾಡಿ ಗ್ರಾಮದಲ್ಲಿ 1905ರಲ್ಲಿ ಸ್ಥಾಪಿಸಿದ ಬೆಲ್ಲದ ಬಾಗೇವಾಡಿ ವ್ಯವಸಾಯ ಸೇವಾ ಸಹಕಾರ ಸಂಘಕ್ಕೆ ಕೈ. ಶ್ರೀ ಬಸಪ್ರಭಪ್ಪ ಮಲ್ಲಪ್ಪಾ ಕತ್ತಿ ಸಂಘದ ಸಂಸ್ಥಾಪಕರು, ಮತ್ತು ಪ್ರಥಮ ಚೇರಮನ್ನರಾದ ದಾಖಲೆಗಳಿರುತ್ತವೆ. ಗ್ರಾಮದ ಸಹಕಾರ ಆಂದೋಲನವು ಕತ್ತಿಯವರ ಮನೆತನದೊಂದಿಗೆ ಬೆಳೆದಿದೆ ಎಂದು ಹೇಳಿದರೆ ಅತಿಶಯೋಕ್ತಿ ಆಗಲಾರದು. 1905ರಿಂದ 1943 ರ ವರೆಗೆ ಕತ್ತಿ ಮನೆತನದವರೆ ಸಂಘದ ಚೇರಮನ್ನರಾಗಿ ಆಳಿಕೆ ನಡೆಸಿದ್ದಾರೆ.

ಆಗರ್ಭ ಶ್ರೀಮಂತರು, ಸ್ವಾತಂತ್ರ್ಯ ಯೋಧರು ಆದ ದಿವಗಂತ ಶ್ರೀ ಮಲ್ಲಪ್ಪ ಸಾತಪ್ಪ ಕತ್ತಿಯವರ ಎರಡನೆಯ ಪುತ್ರರಾಗಿ ದಿವಗಂತ ವಿಶ್ವನಾಥ ಮಲ್ಲಪ್ಪ ಕತ್ತಿಯವರು ದಿ: 28–9–1937 ರಂದು ಜನಿಸಿದರು. ಅವರ ಬಾಲ್ಯಾವಸ್ಥೆ ಬೆಲ್ಲದ ಬಾಗೇವಾಡಿಯಲ್ಲಿ ಕಳೆದು ಮುಂದಿನ ಶಿಕ್ಷಣವನ್ನು ಬೆಳಗಾವಿಯ ಸೆಂಟಪಾಲ್ ಸ್ಕೂಲಿನಲ್ಲಿ ಮುಗಿಸಿದ್ದಾರೆ. 1957 ಅಕ್ಟೋಬರ್ 13 ರಂದು ದಿವಂಗತ ಮುರಿಗೆಪ್ಪ ಕತ್ತಿಯವರು ಎಳೆಯ ವಯಸ್ಸಿನಲ್ಲಿಯೇ ನಿಧನ ಹೊಂದಿದ ನಂತರ ಮರುವರ್ಷ ಅಂದರೆ 1958–59 ರಲ್ಲಿ ಜರುಗಿದ ಬ್ಯಾಂಕಿನ ಸರ್ವಸಾಧಾರಣ ಸಭೆಯಲ್ಲಿ ದಿ. ವಿಶ್ವನಾಥ ಕತ್ತಿಯವರು ಬ್ಯಾಂಕಿನ ಚೇರಮನ್ನರಾಗಿ ಅವಿರೋಧವಾಗಿ ಆಯ್ಕೆಯಾದರು. ಆಗ ಅವರ ಪ್ರಾಯ 21 ವರ್ಷ "ಪ್ರಾಯಂ ಕೂಸಾದಡೇನು ಅಭಿಪ್ರಾಯಂ ಕೂಸೇ" ಎಂಬ ಉಕ್ತಿಯಂತೆ ಮನೆತನದ ಪೂರ್ವಿಕರಿಂದ ದೊರೆತ ಲೋಕಾನುಭವವು ವಿದ್ಯಾಭ್ಯಾಸದಿಂದ ಸಂಗ್ರಹಿಸಿದ ಸೌಜನ್ಯ, ಸಹಿಷ್ಣುತೆ, ಇವೆಲ್ಲ ಇವರನ್ನು

ಎಳೆಯರಲ್ಲಿಯೇ ಹಿರಿಯರಾಗಲು ನೆರವಾದವು. ದಿ. ವಿಶ್ವನಾಥ ಕತ್ತಿಯವರ ರಾಜಕೀಯ ಜೀವನ ಬೆಲ್ಲದ ಬಾಗೇವಾಡಿ ಅರ್ಬನ್ ಬ್ಯಾಂಕಿನ ಮುಖಾಂತರವೇ ಪ್ರಾರಂಭವಾಯಿತೆಂದು ಹೇಳಬಹುದು. ಸುಮಾರು 16 ವರ್ಷಗಳವರೆಗೆ ಬ್ಯಾಂಕಿನ ಚೇರಮನ್‌ರಾಗಿ ಕೆಲಸ ನಿರ್ವಹಿಸಿದ್ದಾರೆ. ಅವರ ಕಾಲಾವಧಿಯಲ್ಲಿ ಬ್ಯಾಂಕು 1969ರಲ್ಲಿ ತನ್ನ ಬೆಳ್ಳಿಹಬ್ಬವನ್ನು ಒಳ್ಳೆಯ ವಿಜೃಂಭಣೆಯಿಂದ ಆಚರಿಸುವುದರೊಂದಿಗೆ ಗ್ರಾಮೀಣ ಭಾಗದಲ್ಲಿ ಪ್ರಥಮವಾಗಿ ಬ್ಯಾಂಕು ಸ್ವಂತ ಕಟ್ಟಡ ಕಟ್ಟಿಸಿದ ಶ್ರೇಯಸ್ಸು ದಿ. ಕತ್ತಿಯವರಿಗೆ ಸಲ್ಲುತ್ತದೆ.

ದಿವಂಗತರ ಕಾರ್ಯಕ್ಷೇತ್ರ ಬೆಲ್ಲದ ಬಾಗೇವಾಡಿಗಷ್ಟೇ ಸೀಮಿತವಾಗಿರದೆ 1961 ನೇ ಇಸ್ವಿಯಲ್ಲಿ ಸಂಕೇಶ್ವರದ ಸಕ್ಕರೆ ಕಾರಖಾನೆಯ ಸಂಚಾಲಕ ಮಂಡಳಿಗೆ ಆಯ್ಕೆಗೊಂಡರು. ದೇಶದಲ್ಲಿಯೇ ಹೆಸರು ವಾಸಿಯಾದ ಸಂಕೇಶ್ವರ ಸಕ್ಕರೆ ಕಾರಖಾನೆ ಬೆಳವಣಿಗೆಗೆ ಕತ್ತಿಯವರು 1961ರಿಂದ ದಿವಂಗತರಾಗುವವರೆಗೆ ಕಾರಖಾನೆಯ ಅಧ್ಯಕ್ಷರಾಗಿ ಮತ್ತು ಕಾರಖಾನೆಯ ನಿರ್ದೇಶಕರಾಗಿ ಸಲ್ಲಿಸಿದ ಸೇವೆ ಚಿರಸ್ಮರಣೀಯವಾಗಿದೆ. ಗ್ರಾಮದ ಅನೇಕ ಸಂಘ–ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳನ್ನು ಚೆನ್ನಾಗಿ ಪೋಷಿಸಿಕೊಂಡು ಬರುವುದರಲ್ಲಿ ಶ್ರಮಿಸಿದ್ದಾರೆ. ಈಗಲೂ ಈ ಸಂಸ್ಥೆಗಳು ಅವರು ಹಾಕಿಕೊಟ್ಟ ಮಾರ್ಗದಲ್ಲಿ ಒಳ್ಳೆಯ ರೀತಿಯಲ್ಲಿ ಕೆಲಸ ಮಾಡುತ್ತಿರುತ್ತವೆ. ಅವುಗಳಲ್ಲಿ ವ್ಯವಸಾಯ ಸೇವಾ ಸಹಕಾರಿ ಸಂಘ, ಗ್ರಾಮ ಸುಧಾರಣಾ ಸಮಿತಿ, ಗಜಾನನ ಉತ್ಸವ ಕಮೀಟಿ, ಬಸವ ಸಮಿತಿ ಮುಂತಾದವುಗಳು ಇರುತ್ತವೆ. 1967ರಲ್ಲಿ ವ್ಯವಸಾಯ ಸೇವಾ ಸಹಕಾರಿ ಸಂಘದ ವಜ್ರ ಮಹೋತ್ಸವವನ್ನು ಸನ್ಮಾನ್ಯಶ್ರೀ ಬಿ.ಡಿ.ಜತ್ತಿಯವರ ನೇತೃತ್ವದಲ್ಲಿ ಜರುಗಿಸಿ ಸಂಘದ ಚೇರಮನ್ನ ಹುದ್ದೆಯಿಂದ ನಿವೃತ್ತರಾದರು.

ಗ್ರಾಮದಲ್ಲಿ 1988ರಲ್ಲಿ ಉದ್ಘಾಟನೆಯಾದ ಅತ್ಯಾಧುನಿಕ ಬ್ಯಾಂಕಿನ ಕಟ್ಟಡ ಕಟ್ಟುವ ಸಲುವಾಗಿ ಸರಕಾರದಿಂದ ನಿವೇಶನವನ್ನು ಅತಿ ಕಡಿಮೆ ಬೆಲೆಗೆ ದೊರಕಿಸಿಕೊಡುವುದರಲ್ಲಿ ವಹಿಸಿದ ಮಹತ್ವದ ಪಾತ್ರ ಮರೆಯಲಾಗದು. ಹೊಸ ಕಟ್ಟಡದಲ್ಲಿ ದಿವಂಗತರ ನೆನಪಿಗಾಗಿ ಸುಮಾರು ಮೂರು ಲಕ್ಷ ರೂಪಾಯಿ ವೆಚ್ಚದಿಂದ ಸಭಾಭವನವನ್ನು ನಿರ್ಮಿಸಿ ಬ್ಯಾಂಕಿನ ಸದಸ್ಯರು ಅವರಿಗೆ ಶ್ರದ್ಧಾಂಜಲಿ ಅರ್ಪಿಸಿದ್ದಾರೆ.

ವಿಧಾನ ಪರಿಷತ್ತಿನ ಸದಸ್ಯರಾದ ಮೇಲೆ ಅವರ ಕಾರ್ಯ ಚಟುವಟಿಕೆ ಜಿಲ್ಲೆಯಿಂದ ರಾಜ್ಯಮಟ್ಟದವರೆಗೂ ವಿಸ್ತಾರಗೊಂಡಿತೆಂದು ಹೇಳಬಹುದು. ಅವರನ್ನು ಅರಿಯದವರೇ ವಿರಳ. ಅವರ ಪರಿಚಯ ಜಾಲದಲ್ಲಿ ಸಿಕ್ಕ ವ್ಯಕ್ತಿಗಳು ಅವರನ್ನು ಮರೆಯಲು ಸಾಧ್ಯವಿಲ್ಲ. ಸಣ್ಣವರೊಂದಿಗೆ ಸಣ್ಣವರಾಗಿ ಹಿರಿಯರೊಂದಿಗೆ ಹಿರಿಯರಾಗಿ ಗ್ರಾಮದ ಪ್ರತಿಯೊಂದು ಸಮಸ್ಯೆಗಳನ್ನು ಸಂದರ್ಭಾನುಸಾರವಾಗಿ ಬಗೆಹರಿಸುವ ಕಲೆ ಅವರಂತೆ ಎಲ್ಲರಿಗೂ ಸಾಧಿಸುವಂತಹದ್ದಲ್ಲ.

ಬೆಳಗಾವಿ ಜಿಲ್ಲೆಯ ರಾಜಕೀಯ ಧುರೀಣರಲ್ಲಿ ಎದ್ದು ಕಾಣುವ ವ್ಯಕ್ತಿತ್ವ ದಿವಂಗತ ಕತ್ತಿಯವರದು ಎಂದು ಹೇಳಿದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. 1958ರಿಂದ ಅವರು ದಿವಂಗತರಾಗುವರೆಗೆ ಸುಮಾರು 27 ವರ್ಷಗಳ ಕಾಲಾವಧಿಯವರೆಗೆ ಅವರನ್ನು ಸಮೀಪದಿಂದ ಕಂಡ ವ್ಯಕ್ತಿಗಳಲ್ಲಿ ನಾನು ಮತ್ತು ವ್ಯವಸಾಯ ಸೇವಾ ಸಹಕಾರಿ ಸಂಘದ ಚೇರಮನ್ನರಾದ ಶ್ರೀ ಶ್ರೀಪಾಲಪ್ಪಣ್ಣಾ ಮುನ್ನೋಳಿ ನಮ್ಮ ಮೂವರ ಗೆಳೆತನ ಒಂದು ವಿಶಿಷ್ಟ ಸ್ವರೂಪದ್ದಾಗಿತ್ತು. ದಿವಂಗತ ಕತ್ತಿಯವರ ರಾಜಕೀಯ ಜೀವನ ರೂಪಿಸುವುದರಲ್ಲಿ ಅವರಿಗೆ ಸೇವೆ ಸಲ್ಲಿಸುವ ಸೌಭಾಗ್ಯ ದೊರಕಿದ್ದು ನಮಗಿಂದು ಹೆಮ್ಮೆ ಎನಿಸುತ್ತದೆ.

ದಿವಂಗತ ವಿಶ್ವನಾಥ ಕತ್ತಿಯವರ ಮತ್ತೊಂದು ವಿಶೇಷ ಗುಣವೆಂದರೆ ತಮ್ಮ ರಾಜಕೀಯ ವಿರೋಧಿಗಳನ್ನು ಆತ್ಮೀಯತೆಯಿಂದ ಕಂಡು ಅವರ ವಿಶ್ವಾಸ ಗಳಿಸಿ ತಮ್ಮ ಕಾರ್ಯಗಳನ್ನು ಸಾಧಿಸುವ ಕಲೆ ಈಗಿನ ರಾಜಕೀಯ ಧುರೀಣರಲ್ಲಿ ಕಾಣಸಿಗುವುದಿಲ್ಲ. ತಮ್ಮ ಆರೋಗ್ಯದ ಕಡೆಗೆ ಚಿಂತಿಸದೆ ಎರಡು ಮೂರು ಸಲ ಹೃದಯ ವಿಕಾರ ಕಾಣಿಸಿಕೊಂಡಾಗಲೂ ಸಹ ಲೆಕ್ಕಿಸದೆ ತಮ್ಮ ಜೀವನವನ್ನು ಸಮಾಜಕ್ಕೆ ಅರ್ಪಿಸಿಕೊಂಡರು.

1985ರಲ್ಲಿ ಜನತಾ ಸರಕಾರ ಅಧಿಕಾರಕ್ಕೆ ಬಂದಾಗ ಶಾಸಕರಾಗಿ ಆಯ್ಕೆಯಾದ ದಿವಂಗತ ಕತ್ತಿಯವರಿಗೆ ಮಂತ್ರಿಯಾಗುವ ಸುಯೋಗ ಬಂದಿತ್ತು. ಆಗ ಅವರ ಅಭಿಮಾನಿಗಳು ಈ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದು ಎಷ್ಟು ಹೇಳಿದರೂ ಕೇಳದೆ ಮಂತ್ರಿ ಪದವಿಯನ್ನು ಶ್ರೀ ಡಿ.ಬಿ.ಇನಾಮದಾರರಿಗೆ ಬಿಟ್ಟುಕೊಟ್ಟ ಸಂಗತಿ ಬಹಳ ಜನರಿಗೆ ತಿಳಿದಿರಲಿಕ್ಕಿಲ್ಲ. ಇಂದು ಅವರು ನಮ್ಮೊಂದಿಗೆ ಬದುಕಿದ್ದರೆ

ನಮ್ಮ ತಾಲ್ಲೂಕಿನ ಚಿತ್ರವೇ ಬದಲಾಗುವುದರಲ್ಲಿ ಸಂದೇಹ ಇರಲಿಲ್ಲ. ಅವರ ಇನ್ನೂ ಅನೇಕ ಕನಸುಗಳು ಕನಸಾಗಿಯೇ ಉಳಿದವು. ಅದರಲ್ಲಿ ಹುಕ್ಕೇರಿಯ ಪೂರ್ವಭಾಗದ ಹಳ್ಳಿಗಳಿಗೆ ನೀರಾವರಿ ಯೋಜನೆ ಮತ್ತು ತಾಲ್ಲೂಕಿನ ತಮ್ಮ ಮತಕ್ಷೇತ್ರದ ಗ್ರಾಮಗಳ ಅಭಿವೃದ್ಧಿ ಮತ್ತು ಕೈಗಾರಿಕೆ ಉದ್ದಿಮೆಗಳನ್ನು ಸ್ಥಾಪಿಸುವುದು ಮುಂತಾದ ಕಾರ್ಯಗಳು ಆಗಬೇಕಾಗಿದ್ದ ಅವರ ಈ ಕನಸುಗಳು ಶಾಸಕರಾದ ಅವರ ಮಗ ಶ್ರೀ ಉಮೇಶ ಕತ್ತಿಯವರು ಈಡೇರಿಸುವಲ್ಲಿ ಪ್ರಯತ್ನಿಸುತ್ತಿದ್ದಾರೆ. ದಿವಂಗತರ ನೆನಪಿಗಾಗಿ ಅವರ ಕಂಚಿನ ಪುತ್ಥಳಿಯನ್ನು ಅವರ ಸ್ಮರಣಾರ್ಥವಾಗಿ ಬ್ಯಾಂಕಿನ ಸದಸ್ಯರೆಲ್ಲರೂ ಸೇರಿ ಅವರ ನೆನಪು ಸದಾ ಹಸಿರಾಗಿ ಉಳಿಯುವಂತೆ ಬ್ಯಾಂಕಿನ ಮುಂಭಾಗದಲ್ಲಿ ನಿಲ್ಲಿಸಿದ್ದಾರೆ.

**ಬಸವರಾಜ ಕತ್ತಿ**
ನಿವೃತ್ತ ಕಾರ್ಯದರ್ಶಿ ಅರ್ಬನ್ ಸೌಹಾರ್ದ
ಸಹಕಾರಿ ಬ್ಯಾಂಕ್, ಬೆಲ್ಲದಬಾಗೇವಾಡಿ

**(ಬೆಲ್ಲದ ಬಾಗೇವಾಡಿಯ ಅರ್ಬನ್ ಸೌಹಾರ್ದ ಸಹಕಾರಿ ಬ್ಯಾಂಕ್ ಆವರಣದಲ್ಲಿ ವಿಶ್ವನಾಥ ಕತ್ತಿಯವರ ಕಂಚಿನ ಪುತ್ಥಳಿ ಅನಾವರಣ ಸಂದರ್ಭದಲ್ಲಿ ಬರೆದ ಲೇಖನ)**

ಅನುಬಂಧ – IV

## ಸ್ನೇಹಜೀವಿ ಶ್ರೀ ವಿಶ್ವನಾಥ ಕತ್ತಿ

### ಮನೆಯ ಹೆಸರು: "ಸ್ನೇಹ"

"ಸ್ನೇಹ" ಮಿತ್ರರ ಸಂಖ್ಯೆಯನ್ನು ಹೆಚ್ಚಿಸುತ್ತದೆ. ದ್ವೇಷಿಗಳ ಸಂಖ್ಯೆಯನ್ನು ಕುಗ್ಗಿಸುತ್ತದೆ, ಎಂಬುದೊಂದು ಆಂಗ್ಲಗಾದೆ. ನಾಡಿನುದ್ದಗಲಕ್ಕೂ ಅಸಂಖ್ಯೆ ಸ್ನೇಹಿತರನ್ನು ಹೊಂದಿದ ಶ್ರೀ ವಿಶ್ವನಾಥರು ಅಕ್ಷರಶಃ ಸ್ನೇಹಜೀವಿ ಅವರ ಆಯುಷ್ಯದ ಬಹಳಷ್ಟು ಕಾಲಾವಧಿ ಸ್ನೇಹ ಕೂಟಗಳಲ್ಲಿಯೇ ಸಂದಿದೆ. ಸ್ನೇಹ–ಸಲಿಲದಲ್ಲಿ ಮೀಯುವುದೇ ಅವರಿಗೆ ಗಂಗಾಸ್ನಾನ ಮತ್ತೆ ಅವರ ಸ್ನೇಹಿತರ ಬೃಹತ್ ರಾಶಿಯನ್ನು ವಿವಿಧ ಸ್ತರ ಇಲ್ಲವೆ ಗುಂಪುಗಳ ವೈವಿಧ್ಯತೆ ನಿಮ್ಮನ್ನು ಬೆರಗುಗೊಳಿಸೀತು. ಅಂತೆಯೇ ನೂತನ ನಿವಾಸಕ್ಕೆ ನಾಮಕರಣ ಮಾಡುವ ಸಂದರ್ಭದಲ್ಲಿ "ಸ್ನೇಹ" ಎಂದು ಇಡಿರಿ ಎಂಬ ನನ್ನ ಶಿಫಾರಸ್ಸಿಗೆ ಒಪ್ಪಿಗೆ ದೊರೆತಾಗ ಶ್ರೀಯುತರ ಸ್ನೇಹಕೂಟದ ಸದಸ್ಯನಾಗಿದ್ದ ನನಗಂತೂ ಮಿತಿಮೀರಿದ ಸಂತಸ.

### ಹೊಸ ಚಿಗುರು, ಹಳೆ ಬೇರು

ಬೆಲ್ಲದ ಬಾಗೇವಾಡಿ ಗ್ರಾಮ ಬೆಲ್ಲಕ್ಕೆ ಹೆಸರಾಗಿದ್ದಂತೆ ಬೆಲ್ಲದ ಗುಣವನ್ನೆ ತನ್ನ ಸ್ಥಾಯಿ ಸಂಪತ್ತನ್ನಾಗಿರಿಸಿಕೊಂಡ "ಸಹಕಾರ" ತತ್ವ ಪಾಲನೆಯಲ್ಲಿ ತನ್ನ ಯಶೋದುಂದುಭಿಯನ್ನು ಮೊಳಗಿಸಿದೆ. 1905ರಷ್ಟು ಹಿಂದೆಯೇ ಪ್ರಾರಂಭಗೊಂಡ ಎಲ್.ಎಸ್.ಎಮ್.ಪಿ. ಸಹಕಾರಿ ಸಂಘ ಈ ಮಾದರಿಯಲ್ಲಿ ಸ್ಥಾಪನೆಗೊಂಡ ಸಂಘಗಳಲ್ಲಿ ನಾಡಿಗೇ ಅತ್ಯಂತ ಹಳೆಯದೆನಿಸಿದೆ. (ಧಾರವಾಡ ಜಿಲ್ಲೆಯನ್ನು ಹೊರತು ಪಡಿಸಿ) ಈ ಸಹಕಾರಿ ಸಂಘದ ಸ್ಥಾಪನೆ ಹಾಗು ಅಭಿವೃದ್ಧಿಯ ಹಂತಗಳಲ್ಲೆಲ್ಲ "ಕತ್ತಿ" ಮನೆತನದ ವಂತಿಗೇ ಸಿಂಹಪಾಲು. ಕತ್ತಿ ಮನೆತನದವರಿಗೆ "ಸಾಹುಕಾರಿಕೆ" ಎನ್ನುವುದು ರಕ್ತಗತವಾಗಿ ಬಂದಿದ್ದ ವಂಶ ಪರಂಪರೆಯ ವ್ಯವಹಾರ. ಈ ಮನೆತನದವರು ಸಾಹುಕಾರಿಕೆಯೊಂದಿಗೆ ಸಹೃದಯತೆಯನ್ನು ಬೆಳೆಸಿಕೊಂಡವರಾದ್ದರಿಂದಲೂ ಹಾಗೂ ಅವರಲ್ಲಿ ರಾಷ್ಟ್ರೀಯ ಮನೋಭಾವ, ಸಾಮಾಜಿಕ, ಪ್ರವೃತ್ತಿಗಳು ತುಂಬಿ ತುಳುಕ್ಕುತ್ತಿದ್ದುದರಿಂದಲೂ, ಸಹಕಾರಾಂದೋಲನವು ಭಾರತದಲ್ಲಿ ಪ್ರವೇಶಿಸಿದ ಕೆಲವೇ ದಿನಗಳಲ್ಲಿ ಆ ಆಂದೋಲನದಿಂದ ತುಂಬಾ ಪ್ರಭಾವಿತರಾದರು. ಮೇಲಾಗಿ ಅವರಲ್ಲಿ ಬಹಳಷ್ಟು ಜನ, ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಿದ ಅಣ್ಣ ಬಸವಣ್ಣನ ಅನುಯಾಯಿಗಳು. ಅಣ್ಣನ ವಚನಗಳಲ್ಲಿ

ಸಹಕಾರ ತತ್ವ ಎಲ್ಲೆಂದರಲ್ಲಿ ತೂರಿಕೊಂಡಿದೆ. "ಕಾಗೆ ಒಂದಗುಳು ಕಂಡರೆ" ಎಂಬ ಶರಣರ ವಚನ, ಸಹಕಾರದ ಸೂತ್ರಗಳನ್ನು ಸಮಗ್ರವಾಗಿಯೂ ಅದೇ ಕಾಲಕ್ಕೆ ಸಂಕ್ಷೇಪವಾಗಿಯೂ ನಿರೂಪಿಸಬಲ್ಲ ಹಿತ ವಚನ. ಕತ್ತಿ ಮನೆತನದವರು ಸಾಹುಕಾರಿಕೆಯನ್ನು, ಆಧುನಿಕ, ಸಾಮಾಜಿಕ ಬದಲಾವಣೆಗಳೊಂದಿಗೆ ಹೊಂದಿಸಿಕೊಂಡರು. ಮನೋವೈಜ್ಞಾನಿಕ ಭಾಷೆಯಲ್ಲಿ ಹೇಳುವುದಾದರೆ ಸಾಹುಕಾರಿಕೆಯನ್ನು ಉದಾತ್ತೀಕರಣಗೊಳಿಸಿಕೊಂಡು ಅದನ್ನು ಸಹಕಾರವನ್ನಾಗಿ ಬದಲಾಯಿಸಿಕೊಂಡರು. ಇದು ಅವರ ವ್ಯವಹಾರ ಚತುರತೆಗೆ ಒಂದು ಜ್ವಲಂತ ನಿದರ್ಶನ. ಈ ಪರಂಪರೆಯಲ್ಲಿ ಬೆಳೆದುಕೊಂಡು ಬಂದ ವಿಶ್ವನಾಥರು ಬಹು ಕಿರಿಯ ವಯಸ್ಸಿನಲ್ಲಿಯೇ ಹಿರಿಯ ಸಹಕಾರರಾಗಿ ರೂಪಗೊಂಡರು. ಹಳೆ ಬೇರು ಹೊಸ ಚಿಗುರಿಗೆ ದಾರಿ ಮಾಡಿಕೊಟ್ಟಿತು.

## ರಂಗ ಪ್ರವೇಶ

ಇಪ್ಪತ್ತೊಂದರ ಹರೆಯದಲ್ಲಿ ಶ್ರೀಯುತರು ಎಲ್.ಎಸ್.ಎಮ್.ಪಿ ಸಹಕಾರಿ ಸಂಗದ ಚೇರಮನ್‌ರಾಗಿ ನಿಯುಕ್ತರಾದುದು ಒಂದು ಮಹತ್ಸಾಧನೆಯೇ ಸರಿ. ಜಾತಿಯ ಕುದುರೆಯ ಚಾಕಚಕ್ಯತೆ ಅಳೆಯಲು ಅನುಭವದ ದಾಖಲೆ ಬೇಕಿಲ್ಲ. ಎಳೆಯ ಅಶ್ವಗಳಲ್ಲಿ ಶಕ್ತಿಯ ಲಕ್ಷಣ ತಂತಾನೆ ಸ್ಫುಟಗೊಳ್ಳುತ್ತದೆ. ಶ್ರೀಯುತರು ಈ ಸಂಘದ ಮೂಲಕ ಸಹಕಾರ ರಂಗ ಪ್ರವೇಶಕ್ಕೆ ಅಧಿಕೃತ ದಾಖಲೆ ಒದಗಿಸಿದರು. ಅವರು ಪ್ರವೇಶಿಸಿದುದು ಕೇವಲ ಸಹಕಾರಿ ರಂಗ ಮಾತ್ರವೇ ಅಲ್ಲ ಕ್ರಮಶಃ ಈ ಸಾಧನೆಯ ವ್ಯಾಪ್ತಿ ವಿಸ್ತಾರಗಳು ಹೊಸ ಆಯಾಮಗಳಿಗೂ ಹರಡಿ ಶ್ರೀಯುತರು ತದನಂತರದ ಮೂರು ದಶಕಗಳ ಅವಧಿಯಲ್ಲಿ ನಾಡಿನ ಸಾಮಾಜಿಕ, ಶೈಕ್ಷಣಿಕ ಹಾಗು ರಾಜಕೀಯ ರಂಗಗಳಲ್ಲೂ "ಮಿನುಗುವ ತಾರೆ" ಎನಿಸಿದರು. ಎಲ್ಲ ರಂಗಗಳಲ್ಲಿ ಎಲ್ಲ ಹಂತಗಳಲ್ಲಿ ಯಶೋಗಾಥೆಯ ಹಿನ್ನೆಲೆ ಸಂಗೀತ, ಮೃದು ಮಧುರವಾಗಿ ಕೇಳುತ್ತಲೇ ಇತ್ತು. ಎಲ್.ಎಸ್.ಎಮ್.ಪಿ. ಸೊಸಾಯಿಟಿಯ ವಜ್ರಮಹೋತ್ಸವ ಇವರು ಚೇರಮನ್‌ರಾಗಿದ್ದ ಅವಧಿಯಲ್ಲಿಯೇ ಸಾಂಗಗೊಂಡದ್ದು ಅಪೂರ್ವ ಯೋಗಾಯೋಗ. ಸಂಘದ ಚಟುವಟಿಕೆಗಳ ಸಂಘಟನೆಯಲ್ಲಿ ತೋರಿಸಿದ ದಕ್ಷತೆಯನ್ನು ವಜ್ರಮಹೋತ್ಸವಾಚರಣೆಯನ್ನು ಅರ್ಥಪೂರ್ಣವಾಗಿ ನಡೆಸುವಲ್ಲಿಯೂ ಮೆರೆದರು. ಸಂಘಕ್ಕಾಗಿ ಶ್ರಮಿಸಿದ ಕತ್ತಿ ಮನೆತನದ ಹಿರಿಯರನ್ನು ಇನ್ನುಳಿದ ಹಳೆಯ ಪದಾಧಿಕಾರಿಗಳನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಂಡರು. ಸಂಘ ತನ್ನ ಅಂತಸ್ತುಗಳನ್ನು ಎತ್ತರಿಸಿಕೊಂಡು ಬಂದ ರೀತಿ-ನೀತಿಗಳನ್ನು ವರದಿಯ ಮೂಲಕ ಸ್ಪಷ್ಟಪಡಿಸಿದರು.

ಈ ಸಂದರ್ಭದಲ್ಲಿ ಒಂದು ಗಮನಿಸಬೇಕಾದ ಅಂಶವೆಂದರೆ ವಿಶ್ವನಾಥರಾದಿಯಾಗಿ ಪ್ರಸ್ತುತ ಸಂಘಕ್ಕಾಗಿ ಶ್ರಮಿಸಿದ ಕತ್ತಿ ಮನೆತನದವರು, ತಮ್ಮ ಪಾಡಿಗೆ ತಾವು ಶ್ರೀಮಂತಿಕೆಯ ಸುಪ್ಪತ್ತಿಗೆಯಲ್ಲಿ ಪವಡಿಸುವಂಥವರು. ಆಂಗ್ಲಭಾಷೆಯಲ್ಲಿ ಬಳಸುವ ರೂಢಿಯ ವರ್ಣನೆಯ ಮಾತು "ಬೆಳ್ಳಿಯ ಚಮಚೆಯೊಂದಿಗೆ ಹುಟ್ಟಿದವರು" ಮತ್ತೆ ಇವರಿಗೆ ಹೇಗೆ ಬಂದಿತು–ಬಡವರ, ಮಧ್ಯಮ ವರ್ಗದ ಜನರ ಚಿಂತನೆಯ ವಿಚಾರ? ಬೆಲ್ಲದ ಬಾಗೇವಾಡಿಯ ಕತ್ತಿ ಕುಟುಂಬದ ಸಿರಿವಂತರು, ಅನ್ಯ ಸಿರಿವಂತರಂತಲ್ಲ. ಇದು ಮೇಲಿನ ಪ್ರಶ್ನೆಗೆ ಉತ್ತರ. ಅವರು ಮನೆಯಲ್ಲೂ ಶ್ರೀಮಂತರು, ಮನದಲ್ಲೂ ಶ್ರೀಮಂತರು.

ಈ ಕುಟುಂಬದ ಹಳೆಯ ವ್ಯಕ್ತಿಗಳ ಚರಿತ್ರೆಯಿಂದ ತೂರಿ ಬರುವ ಅಂಶಗಳೆಂದರೆ–ಇವರಲ್ಲಿ ಅನೇಕರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ಇವರು ಸಾಹುಕಾರಿಕೆಯನ್ನು ನಡೆಸುತ್ತಿದ್ದರೂ ಅದಕ್ಕೆ ಕೆಲವು ನಿಯತ್ತು ನಿಯಮಗಳಿದ್ದವು. ಉದಾ: ಸಕಾಲಕ್ಕೆ ಸಾಲ ಮರುಪಾವತಿ ಮಾಡಲು ಬಂದ ಸಾಲಗಾರ ಸಾಹುಕಾರರಲ್ಲಿ ಊಟ ಮಾಡಿ ಹೋಗುತ್ತಿದ್ದುದು ಒಂದು ನಿಯತ್ತು. ಸಹಕಾರ ಸಂಘ ಇವರ ಪಾಲಿಗೆ ಸ್ವಂತದ ಲಾಭಕ್ಕಾಗಿ ಬೇಕಾದ ಸಂಸ್ಥೆಯಾಗಿರಲಿಲ್ಲ. ತನ್ಮೂಲಕ ಸಮಾಜ ಬಾಂಧವರ, ಆರ್ಥಿಕವಾಗಿ ಹಿಂದುಳಿದವರ, ಗ್ರಾಮದ ದೀನ–ದಲಿತರ ಸೇವಾಕಾಂಕ್ಷೆ, ಇವರೆಲ್ಲರು ಸಹಕಾರ ಸಂಘದ ರಚನೆ ಹಾಗು ಪೋಷಣೆಗೆ ಮನಸ್ಸು ಮಾಡಿರುವುದರ ಹಿನ್ನೆಲೆಯಾಗಿತ್ತು.

ಜನಸಾಮಾನ್ಯರ ಜೀವನದೊಡನೆ ಬೆರೆಯಬೇಕು. ಅವರ ಜೀವನಾವಶ್ಯಕ ವಸ್ತುಗಳ ಬೇಡಿಕೆಯೊಡನೆ ಸ್ಪಂದಿಸಬೇಕು, ಸಾಧ್ಯವಿದ್ದಷ್ಟು ಅವರ ಜೀವನಮಟ್ಟಗಳನ್ನು ಎತ್ತರಿಸಿಕೊಳ್ಳಲು ನೆರವಾಗಬೇಕೆಂಬ ಆಕಾಂಕ್ಷೆಗೆ ಮಾರ್ಗ ಶೋಧಿಸಿಕೊಂಡರು. ಇದು ಮಾನವೀಯ ಮೌಲ್ಯಗಳಿಗೆ "ಕತ್ತಿ ಪರಿವಾರ"ದವರು ಗೌರವ ನೀಡಿದ ಧೋರಣೆ. ಇದು ಹಿರಿತನದ ನಿಜವಾದ ಲಕ್ಷಣ, ಹೃದಯ ಶ್ರೀಮಂತಿಕೆಯನ್ನು ಅಭಿವ್ಯಕ್ತಿಗೊಳಿಸುವ ಅರ್ಥಪೂರ್ಣ ವಿಧಾನ. ವಿಶ್ವನಾಥರು ತಮ್ಮ ಹಿರಿಯರ ವಿಶೇಷತೆ. ತಮ್ಮ ಪೂಜ್ಯ ತಂದೆ ಮಲ್ಲಪ್ಪನವರ ದಾರಿಯನ್ನೇ ತುಳಿದು ಮುನ್ನಡೆದರು. ಮಾರ್ಗ ಸುಗಮವಾಯಿತು. ಯಶೋಲಕ್ಷ್ಮೀ ಇದ್ದಲ್ಲಿಗೆ ಬಂದು ಆಶೀರ್ವದಿಸಿದಳು.

1958 ರಲ್ಲಿ ಸಾರ್ವಜನಿಕ ಜೀವನದಲ್ಲಿ ಕಾಲಿರಿಸಿದ ಶ್ರೀಯುತರು ಮುನ್ನಡೆಯ ಮಾರ್ಗದಲ್ಲಿ ನಿಲ್ಲಲೇ ಇಲ್ಲ. ಬಹಳವಾದರೆ ಹುದ್ದೆಗಳಲ್ಲಿ ಕೆಲವು ಬದಲಾವಣೆಗಳನ್ನು ಒಪ್ಪಿದರೇ ಹೊರತು ಸಾರ್ವಜನಿಕ ಜೀವನಕ್ಕೆ ವಿದಾಯ ಹೇಳಲಿಲ್ಲ. ಅವರ ಸಾಧನೆಯ ಕೆಲವು ಗಣನೀಯ ಮೆಟ್ಟಿಲುಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

1958 ರಲ್ಲಿ ದಿ. ಬೆಲ್ಲದ ಬಾಗೇವಾಡಿ ಅರ್ಬನ್ ಕೋ-ಆಪ್ ಬ್ಯಾಂಕ ಲಿ, ಬೆಲ್ಲದ ಬಾಗೇವಾಡಿ ಚೇರಮನ್ನರಾಗಿ ಆಯ್ಕೆ.

1961ರಲ್ಲಿ ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ ನಿ. ಸಂಕೇಶ್ವರ ದಿಗ್ದರ್ಶಕರಾಗಿ ಆಯ್ಕೆ, ಅದೇ ವರ್ಷ ಗ್ರಾಮದಲ್ಲಿ ಗ್ರಾಮ ಸುಧಾರಣಾ ಸಮಿತಿಯ ಸ್ಥಾಪನೆ ಮಾಡಿದರು.

1963 ರಲ್ಲಿ ದಿ. ಬೆಲ್ಲದ ಬಾಗೇವಾಡಿ ಕೃಷಿ ಸೇವಾ ಸಹಕಾರಿ ಬ್ಯಾಂಕ್ ಲಿ, (ಆಗಿನ ಎಲ್.ಎಸ್.ಎಮ್.ಪಿ.ಸೊಸಾಯಿಟಿ)ಯ ಚೇರಮನ್ನರಾಗಿ ಆಯ್ಕೆ.

1963 ರಲ್ಲಿ ಘಟಪ್ರಭಾದ ಜೆ.ಜಿ. ಸಹಕಾರಿ ಆಸ್ಪತ್ರೆಯ ದಿಗ್ದರ್ಶಕರಾಗಿ ಆಯ್ಕೆ. 1967 ರಲ್ಲಿ ಎಲ್.ಎಸ್.ಎಮ್.ಪಿ. ಸಹಕಾರಿ ಸಂಘದ ವಜ್ರ ಮಹೋತ್ಸವ ಸಂಘಟನೆ. 1973 ರಲ್ಲಿ ಬೆಲ್ಲದ ಬಾಗೇವಾಡಿ ಅರ್ಬನ್ ಕೋ ಆಪ್ ಕ್ರೆಡಿಟ್ ಬ್ಯಾಂಕಿನ ಬೆಳ್ಳಿಹಬ್ಬವನ್ನು ಯಥೋಚಿತ ರೀತಿಯಲ್ಲಿ ವ್ಯವಸ್ಥೆಗೊಳಿಸಿದರು. 1974ರಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿ ಆಯ್ಕೆಗೊಂಡದ್ದು. 1974 ರಲ್ಲಿ ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ ನಿ. ಸಂಕೇಶ್ವರ ಚೇರಮನ್ನರಾಗಿ ಆಯ್ಕೆ. 1979 ರಲ್ಲಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ದಿಗ್ದರ್ಶಕರಾಗಿ ಆಯ್ಕೆ. 1983 ರಲ್ಲಿ ಕರ್ನಾಟಕ ಸಹಕಾರಿ ಸಕ್ಕರೆ ಕಾರಖಾನೆ ಮಹಾಮಂಡಳ ನಿ, ಬೆಂಗಳೂರು ಅಧ್ಯಕ್ಷರಾಗಿ ಆಯ್ಕೆ. 1984 ರಲ್ಲಿ ಕರ್ನಾಟದ ಸುಪ್ರಸಿದ್ಧ ಶಿಕ್ಷಣ ಸಂಸ್ಥೆಯಾದ ಕೆ.ಎಲ್.ಇ. ಸಂಸ್ಥೆಯ ಅಧ್ಯಕ್ಷರಾಗಿ ಆಯ್ಕೆ

1985 ರಲ್ಲಿ ಕರ್ನಾಟಕ ರಾಜ್ಯ ವಿಧಾನ ಸಭೆಗೆ, ಹುಕ್ಕೇರಿ ಮತಕ್ಷೇತ್ರದ ಪ್ರತಿನಿಧಿಯಾಗಿ ಪ್ರಚಂಡ ಬಹುಮತದಿಂದ ಆಯ್ಕೆ.

ರಾಜಕೀಯ ಆಯ್ಕೆಗಳನ್ನು ಹೊರತುಪಡಿಸಿದ, ಉಳಿದೆಲ್ಲ ಸಂಘ-ಸಂಸ್ಥೆಗಳಲ್ಲಿ ಶ್ರೀಯುತರನ್ನು ಸರ್ವಾನುಮತದಿಂದಲೇ ಆಯ್ಕೆ ಮಾಡಿದ ಸಂಗತಿಯನ್ನು ಹಾಗೂ ಇವರು ಮಾರ್ಗದರ್ಶನ ಮಾಡುತ್ತಿದ್ದ ಬಹುತೇಕ ಸಂಘಗಳಲ್ಲಿ ಚುನಾವಣೆಗಳೇ ನಡೆಯುತ್ತಿರಲಿಲ್ಲ (ಪ್ರತಿನಿಧಿಗಳ ಆಯ್ಕೆ ಪರಸ್ಪರ ತಿಳುವಳಿಕೆಯಿಂದ ನಡೆಯುತ್ತಿತ್ತು)ವೆಂಬ ಸಂಗತಿಯನ್ನು ಪ್ರಸ್ತಾಪಿಸುವುದು ಆವಶ್ಯಕವೆನಿಸುತ್ತದೆ. ಸಂಘ-ಸಂಸ್ಥೆಗಳ ಒಳ ರಾಜಕೀಯ, ಆಯಾ ಸಂಘಗಳ ಅವನತಿಗೆ ಕಾರಣವಾಗಿರುವುದನ್ನು ಸಹಕಾರ ವಲಯದ ಆಸಕ್ತ ಅಧ್ಯಯನಶೀಲರಾದವರು ತಿಳಿದ ಸಂಗತಿಯೇ ಆಗಿದೆ.

ಶ್ರೀಯುತ ವಿಶ್ವನಾಥರ ಸಾಧನೆಗಳ ಪ್ರಮುಖ ಹೆಜ್ಜೆಗಳನ್ನು ಮಾತ್ರ ಇಲ್ಲಿ ನಮೂದಿಸಿದೆಯೇ ವಿನಃ ಅವರು ಗೈದ 'ಇತರ ಬಗೆಯ ಜನೋಪಯೋಗಿ ಸೇವೆಗಳ

ವಿವರಗಳನ್ನು ಇಲ್ಲಿ ಒದಗಿಸಿಲ್ಲ. ಒಟ್ಟಾರೆ ತಮ್ಮ ರಕ್ತದೊಂದಿಗೆ ಬೆಳೆದುಕೊಂಡು ಬಂದಿದ್ದ ಜನಸೇವೆಯ ಹಂಬಲವನ್ನು ತಮ್ಮ ಮನೆತನದ ಹಿರಿಯರಿಂದ ಬಳುವಳಿಯಾಗಿ ಬಂದಿದ್ದ ಕಾರ್ಯತಂತ್ರ (ಟೆಕ್ನಿಕ್)ದ ಬಳಕೆಯೊಂದಿಗೆ ಮಿಶ್ರಣಗೊಳಿಸಿಕೊಂಡು ಸೇವಾ ಕ್ಷೇತ್ರಗಳಲ್ಲಿ ಯಶಸ್ಸು ಪಡೆಯುತ್ತಲೇ ಮುನ್ನಡೆದರು. ಇವರ ಸೇವೆಯ ಫಲಗಳೆಂದರೆ ಸ್ವಂತಕ್ಕೆ ಸಂತೃಪ್ತ ಹಾಗು ಸಮಾಜಕ್ಕೆ ಹಿತ– ಎರಡೂ ಪರಮಾವಧಿ ಪ್ರಮಾಣದಲ್ಲಿ ಲಭ್ಯವಾಗುವಂತಿರುತ್ತಿತ್ತು. ಅದುವೇ ಸಮಾಜ ಸೇವಕನ ಜೀವನ ಸಾಧನೆಗಳನ್ನು ಮೌಲ್ಯಮಾಪನ ಮಾಡುವ ಸರಿಯಾದ ಅಳತೆಗೋಲು.

ರಕ್ತಗತವಾಗಿ ಬೆಳೆದು ಬಂದಿದ್ದ ದಣಿವರಿಯದ ಸೇವಾಕಾಂಕ್ಷೆ ವೈಯಕ್ತಿಕವಾಗಿ ಅವರ ಆರೋಗ್ಯದ ಮೇಲೆ ಅನಿಷ್ಟ ಪರಿಣಾಮ ಉಂಟು ಮಾಡಿದುದು ದುರ್ದೈವದ ಬೆಳವಣಿಗೆ. ರಕ್ತದೊತ್ತಡಗಳಲ್ಲಿ ಏರಿಳಿತ, ಮಧ್ಯಮಧ್ಯ ಕಾರ್ಯಬಾಹುಳ್ಯ, ಸುದೀರ್ಘ ಪ್ರವಾಸಗಳು– ಈ ಎಲ್ಲ ಸಂಕೀರ್ಣ ಅನಾರೋಗ್ಯಕ್ಕೆ ಕಾರಣಗಳೆನಿಸಿದ ಅಂಶಗಳಿಂದಾಗಿ ಅನಾರೋಗ್ಯ ಉಲ್ಬಣಗೊಳ್ಳುತ್ತಲೇ ಹೋಯಿತು. ಶ್ರೀಯುತರು 20–3–1985 ರಂದು ವಿಧಿವಶರಾದರು. ಅಪಾರ ಜನಸ್ತೋಮ ಅಂತ್ಯ ಸಂಸ್ಕಾರದಲ್ಲಿ ಪಾಲ್ಗೊಂಡು ತಮ್ಮ ಮುಖಂಡನಿಗೆ ಅಂತಿಮ ನಮನ ಸಲ್ಲಿಸಿದ ಆ ದೃಶ್ಯ– ಅನ್ಯಾದೃಶ್ಯವಾಗಿತ್ತು. ಆ ಸ್ಮರಣೆ ಮತ್ತೆ ಮತ್ತೆ ಕಣ್ಣುಗಳನ್ನು ಒದ್ದೆಗೊಳಿಸುತ್ತದೆ.

**ಮಿತ್ರ, ತತ್ವಜ್ಞಾನಿ, ಮಾರ್ಗದರ್ಶಕ–(ಫ್ರೆಂಡ್, ಫಿಲಾಸಫರ್, ಆ್ಯಂಡ್ ಗೈಡ್)**

ಒಬ್ಬ ಶ್ರೇಷ್ಠ ಮುಂದಾಳುವನ್ನು ಆಂಗ್ಲಭಾಷೆಯಲ್ಲಿ ವರ್ಣಿಸುವ ರೂಢಿಗತ ಪದಗಳಿವು. ಇವುಗಳನ್ನು ಇಲ್ಲಿ ಎತ್ತಿಕೊಳ್ಳುವ ಕಾರಣವೆಂದರೆ ಶ್ರೀ ವಿಶ್ವನಾಥರಿಗೆ ನೂರಕ್ಕೆ ನೂರರಷ್ಟು ಅನ್ವಯವಾಗುವ ಪದಗಳಿವು ಎಂಬುದನ್ನು ಅವರ ಸನಿಹದಲ್ಲಿದ್ದವರೆಲ್ಲ ಕಂಡುಕೊಂಡಿದ್ದಾರೆ. ಲೇಖನದುದ್ದಕ್ಕೂ ಶ್ರೀಯುತರ ಸ್ನೇಹಪರತೆಯ ಪ್ರಸ್ತಾಪ ಹಾಸುಹೊಕ್ಕಾಗಿ ಮಾಡಿದೆ. ವೈಯಕ್ತಿಕ ಸ್ತರದಲ್ಲಿಯೂ ಸಂಘ–ಸಂಸ್ಥೆಗಳ ಚಾಲನೆಯ ವಿಷಯದಲ್ಲಿಯೂ ಶ್ರೀಯುತರು ತಮ್ಮದೇ ಶೈಲಿಯಲ್ಲಿ ಮಾರ್ಗದರ್ಶನ ಮಾಡುತ್ತಿದ್ದುದು ಉಂಟು. ಇವರ ಈ "ರಾಜಿ" ಮಾಡಿಸುವ ಗುಣದಿಂದಾಗಿ ಅನೇಕ ಒಳಜಗಳಗಳು ಮಾಯವಾಗಿವೆ. ಪರಸ್ಪರ ತಪ್ಪು ತಿಳುವಳಿಕೆಯಿಂದಾಗಿ ಒಬ್ಬರನ್ನೊಬ್ಬರು ಅಗಲುತ್ತಿದ್ದ ಮಿತ್ರರು ಮತ್ತೆ ಒಂದಾಗಿದ್ದುದೂ ಉಂಟು. ತತ್ವಜ್ಞಾನಿಯ ರೀತಿಯಲ್ಲಿ ಶ್ರೀಯುತರು ಪ್ರಸ್ತುತ ಸಾಮಾಜಿಕ ಹಾಗು ಆರ್ಥಿಕ ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದರು. ಅವರು ಸೂಚಿಸುತ್ತಿದ್ದ ಪರಿಹಾರವು ಅತ್ಯಂತ "ವ್ಯವಹಾರಿಕ" (ಪ್ರ್ಯಾಕ್ಟಿಕಲ್) ಆಗಿರುತ್ತಿತ್ತು. ಅಪಾರ ಅನುಭವದ ಹಿನ್ನೆಲೆ

ಆ ಪರಿಹಾರ ಮಾರ್ಗಕ್ಕಿರುತ್ತಿತ್ತು. ಪ್ರಸ್ತುತ ಬೃಹದಾಕಾರದಲ್ಲಿ ಬೆಳೆದು ನಿಂತಿರುವ ಕೃಷಿ ಸೇವಾ ಸಹಕಾರಿ ಬ್ಯಾಂಕಿಗೆ ಸಂದ ಶ್ರೀಯುತರ ಮಾರ್ಗದರ್ಶನವನ್ನೇ ಇಲ್ಲಿ ನಿದರ್ಶನವನ್ನಾಗಿ ನೋಡಬಹುದು. ಶ್ರೀಯುತರು ಚೇರಮನ್ನರಾಗಿದ್ದ ಅವಧಿಯಲ್ಲಿ ಈ ಸಂಘದ ಮೂಲಕ ಸಾಲ ಸೌಲಭ್ಯ ಮಾತ್ರವಲ್ಲದೇ ಕೃಷಿಗೆ ಬೇಕಾಗುವ ರಸಾಯನಿಕಗಳ ವಿತರಣೆಯನ್ನು ಪ್ರಾರಂಭಿಸಲಾಯಿತು. ಸದಸ್ಯರಿಗೆ ನಿತ್ಯೋಪಯೋಗಿ ವಸ್ತುಗಳಾದ ಸಕ್ಕರೆ, ವನಸ್ಪತಿ ಎಣ್ಣೆ, ಇತ್ಯಾದಿಗಳ ಪುರವಠ ನಡೆಯಿತು. ಈ ಎಲ್ಲ ಸೌಲಭ್ಯಗಳ ಪ್ರಯೋಜನ ಪಡೆದ ಬಡ ಕುಟುಂಬಗಳ ಸಂಖ್ಯೆ ಸಹಸ್ರ ಸಹಸ್ರ ಸಂಖ್ಯೆಯನ್ನು ಮೀರುವಂತಿದೆ. ಸ್ಮರಣ ಸಂಚಿಕೆಯಲ್ಲಿ ಶ್ರೀಯುತರ ವ್ಯಕ್ತಿ ಪರಿಚಯ ಮಾಡಿಕೊಡುವುದರ ಮೂಲಕ "ಕೃಷಿ ಸೇವಾ ಸಹಕಾರಿ ಬ್ಯಾಂಕು" ತನ್ನ ಶ್ರದ್ಧಾಂಜಲಿ ಸಲ್ಲಿಸುವ ಸಮಯೋಚಿತ ಕಾರ್ಯ ಮಾಡಿ ಕೃತಾರ್ಥವಾಗಿದೆ. ಅರ್ಬನ್ ಬ್ಯಾಂಕಿನವರು ತಮ್ಮ ನೂತನ ಭವ್ಯ ಕಟ್ಟಡದ ಬದಿಯಲ್ಲಿಯೇ ವಿಶ್ವನಾಥರ ಸುಂದರ ಪುತ್ಥಳಿಯನ್ನು ನಿರ್ಮಿಸಿ ಅದು ತಮ್ಮ ಶಾಶ್ವತ ಶ್ರದ್ಧಾಂಜಲಿ ಎನ್ನುವ ರೀತಿಯಲ್ಲಿ ನಿಲ್ಲಿಸಿದ್ದಾರೆ.

ಮನೆಯಲ್ಲಿ ಶ್ರೀಯುತರ ಸುಪುತ್ರರಿಬ್ಬರೂ ತಂದೆಯ ಸಮಾಜ ಸೇವಾಕಾಂಕ್ಷೆಯ ಹೆಜ್ಜೆಯ ಗುರುತುಗಳನ್ನು ಆಧಾರವಾಗಿಟ್ಟುಕೊಂಡು, ಅದೇ ದಾರಿಯಲ್ಲಿ ಮುನ್ನಡೆಯುವುದರ ಮೂಲಕ ತಂದೆಯ ಆತ್ಮಕ್ಕೆ ಶಾಂತಿ ಸಂತೃಪ್ತಿಯನ್ನು ನೀಡುತ್ತಲಿದ್ದಾರೆ. ಈ ಸೇವಾ ಪರಂಪರೆ ಮುಂದುವರೆದಷ್ಟು ಸಮಯ ನಾಡಿನ ಭಾಗ್ಯ ಬೆಳೆಯುತ್ತಲೇ ಹೋಗುತ್ತದೆ. ಡಿ.ವಿ.ಜಿಯವರ ಈ ನುಡಿಗಳು ಇಲ್ಲಿ ಪ್ರಸ್ತುತವೆನಿಸಿವೆ:

**ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಗಸು**
**ಹೊಸ ಯುಕ್ತಿ ಹಳೆ ತತ್ವದೊಡಗೂಡೆ ಧರ್ಮ**
**ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ**
**ಜಸವು ಜನ ಜೀವನಕ್ಕೆ–ಮಂಕುತಿಮ್ಮ**

ಬಿ.ಬಿ.ಕರಡಿ
ನೇಸರಗಿ

(ದಿ. ಬೆಲ್ಲದ ಬಾಗೇವಾಡಿ ಕೃಷಿ ಸೇವಾ ಸಹಕಾರಿ ಬ್ಯಾಂಕ ಲಿ., ಕಟ್ಟಡ ಉದ್ಘಾಟನಾ ಸಮಾರಂಭ–1998 ರ ಸ್ಮರಣ ಸಂಚಿಕೆಗಾಗಿ ಬರೆದ ಲೇಖನ)

ಅನುಬಂಧ – V

# ನನ್ನ ತಂದೆ

## ಸೇವೆಯ ಸಾಕಾರಮೂರ್ತಿಯಾಗಿದ್ದರು

ಒಬ್ಬ ಮಗಳು ತನ್ನ ತಾಯಿ–ತಂದೆಗಳ ಬಗೆಗೆ ಬರೆಯುವುದು ಬಹಳ ಕಷ್ಟದ ಕೆಲಸ. ಅದೊಂದು ಭಾವಲೋಕ. ಅನುಭವ ಪ್ರಪಂಚ. ಅದನ್ನು ಅಕ್ಷರರೂಪಕ್ಕಿಳಿಸುವುದು ಅತ್ಯಂತ ಪ್ರಯಾಸದ ಕೆಲಸ. ಅದರಲ್ಲಿಯೂ ನನ್ನ ತಂದೆ ಅವರು ಇನ್ನೂ ಬಾಳಿ ಬೆಳಗಬೇಕಾದ ಕಾಲದಲ್ಲಿಯೇ ಕಾಲನ ಕರೆಗೆ ಓಗೊಟ್ಟ ನಮ್ಮನ್ನು ಬಿಟ್ಟು ಹೋಗಿಬಿಟ್ಟರು. ಅವರ ಅಗಲಿಕೆ ನಮಗಿನ್ನೂ ಆರದ ಗಾಯ. ಅವರ ನೆನಪು ಆ ಗಾಯವನ್ನು ಮಾಯಲು ಬಿಟ್ಟಿಲ್ಲ. ಇಂತಹ ಮನಸಿನ ತುಮುಲದಲ್ಲಿ ನಾನು ಅವರ ಯಾವ ಗುಣವನ್ನು ಬಣ್ಣಿಸಲಿ? ಯಾವ ಮುಖದ ಚಿತ್ರಣ ಕೊಡಲಿ? ತಿಳಿಯದಂತಾಗಿದೆ. ಯಾವುದೇ ಮುಖದ ಚಿತ್ರಣ ಕೊಡಲು ಹೊರಟರೂ, ತಂದೆಯ ಮಮತೆಯ ಸೆಳೆತಕ್ಕೆ ಸಿಕ್ಕಿಕೊಳ್ಳುತ್ತೇನೆ. ಆ ಭಾವಬಂಧನ ಪರಿಧಿಯನ್ನು ದಾಟಲಾಗದ ಅವ್ಯಕ್ತ ಭಯದಲ್ಲಿ ತೊಳಲಾಡುತ್ತೇನೆ. ಆದರೂ ಪ್ರಯತ್ನಿಸುವೆ.

ತಂದೆಯವರ ಅನೇಕ ಚಟುವಟಿಕೆಗಳನ್ನು ನಾನು ತೀರಹತ್ತಿರದಿಂದ ಬಲ್ಲೆ. ಬಾಲ್ಯದ ನೆನಪಿನಲ್ಲಿ ಅಚ್ಚೊತ್ತಿದ ಒಂದು ಚಿತ್ರವೆಂದರೆ ಅವರ ಶಿಸ್ತು. ಮನೆಯೊಳಗಿನ ಕೆಲಸಗಳು ಸಮಯಕ್ಕೆ ಸರಿಯಾಗಿ ನಡೆಯಬೇಕು. ಮನೆಯ ಅಲಂಕರಣ ಒಪ್ಪೋರಣವಾಗಿರಬೇಕು. ಆಳು–ಕಾಳು, ಧನ–ಧಾನ್ಯ, ಬರುವ ಹೋಗುವ ಜನರಲ್ಲಿ ಅವರು ಶಿಸ್ತನ್ನು ಬಯಸುತ್ತಿದ್ದರು. ಅದರಂತೆಯೇ ಬದುಕುತ್ತಿದ್ದರು. ಅವರ ಶಿಸ್ತು ಶುಷ್ಕವಾದ ಶಿಸ್ತು ಆಗಿರಲಿಲ್ಲ. ಅದು ಕಲಾತ್ಮಕ, ಲವಲವಿಕೆಯಿಂದ ಕೂಡಿದ ಜೀವನಶೈಲಿಯಾಗಿತ್ತು. ಅವರ ಶಿಸ್ತಿಗೆ, ಸ್ನೇಹಕ್ಕೆ ನಾವೆಲ್ಲ ಆಕರ್ಷಿತರಾಗಿ ಅವರು ಹೇಳಿದಂತೆಯೇ ಕೇಳುತ್ತಿದ್ದೆವು.

ಎಳನೆಯ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡಿದ್ದರು ನಮ್ಮ ತಂದೆ. (ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಪ್ರೀತಿಯ ಅಣ್ಣನನ್ನು ಕಳೆದುಕೊಂಡರು.) ಹೀಗಾಗಿ ಅವರ ಬಾಲ್ಯ ಕಷ್ಟದಲ್ಲಿಯೇ ಕಳೆಯಿತು. ಬೆಳಗಾವಿಯಲ್ಲಿದ್ದು ಓದಿದ್ದು ದೊಡ್ಡ ಸಾಹಸವಾಯಿತು. ತಮ್ಮ ಅನುಭವದಿಂದ ಮಕ್ಕಳನ್ನು ಚೆನ್ನಾಗಿ ಓದಿಸಿ, ಮುಂದೆ ತರುವ ಹಂಬಲ ಬಹಳವಾಗಿತ್ತು. ಆದರೆ ಅದಕ್ಕಿಂತಲೂ ಮಕ್ಕಳು ಎಳೆಯ ವಯಸ್ಸಿನಲ್ಲಿ ಕಷ್ಟಕ್ಕೆ ಸಿಕ್ಕಿಕೊಳ್ಳಬಾರದೆಂಬ ಕಳಕಳಿಯೂ ಮುಖ್ಯವಾಗಿತ್ತು. ಮಕ್ಕಳೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ.

ಬೆಲ್ಲದ ಬಾಗೇವಾಡಿ ಅರ್ಬನ್ ಬ್ಯಾಂಕಿನಿಂದ ಅವರು ರಾಜಕೀಯ ಪ್ರವೇಶ ಮಾಡಿದರು. ಸೇವೆ, ಸಹಾಯ ಅವರ ಜೀವನದ ಮಂತ್ರಗಳಾಗಿದ್ದವು. ಈ ಗುಣಗಳಿಂದ ಅವರು ರಾಜಕೀಯ ರಂಗದಲ್ಲಿ ಹಂತ ಹಂತಕ್ಕೆ ಏರಿದರು. ರಾಜ್ಯ ರಾಜಕಾರಣದಲ್ಲಿ ಕ್ರಿಯಾಶೀಲರಾದರು. ಬೆಳಗಾವಿ ಜಿಲ್ಲೆಯಲ್ಲಿ 'ಕತ್ತಿ ಸಾಹುಕಾರ' ಎಂಬುದು ಜನಪ್ರಿಯ ಹೆಸರಾಯಿತು. ಜೀವನರಂಗದಲ್ಲಿ ಸಾಧನ ಸಾಮಗ್ರಿಗಳ ಕೊರತೆ ಇರಲಿ, ಸವಲತ್ತುಗಳ ಅಭಾವವಿರಲಿ, ಅದೆಂಥ ತೊಂದರೆಗಳೂ ಎದುರಾಗಲಿ ಅಂಜದೇ, ಅಳುಕದೇ, ಎದೆಗುಂದದೇ ಅವುಗಳನ್ನು ಎದುರಿಸಿ ಮುನ್ನುಗ್ಗುವ ಗಟ್ಟಿತನ ಅವರಲ್ಲಿತ್ತು. ಛಲವಿದ್ದರೆ ಏನನ್ನಾದರೂ ಸಾಧಿಸಬಹುದೆಂದು ತೋರಿಸಿ ಕೊಟ್ಟ ಕತ್ತಿ ಸಾಹುಕಾರರು ತಮ್ಮ ವೈಯಕ್ತಿಕ ಜೀವನ, ಕೌಟುಂಬಿಕ ಜೀವನ ಹಾಗು ರಾಜಕೀಯ ಜೀವನದಲ್ಲಿ ಘನತೆ ಮೆರೆದು ಸಮಾಜದಲ್ಲಿ ನಿಸ್ವಾರ್ಥ ಸೇವಕರೆನಿಸಿದರು. ಬಡವರ ಬಂಧು ಎನಿಸಿದರು. ನಿರ್ಮಲ ಹೃದಯದ ಜನಮೆಚ್ಚುಗೆಯ ನಾಯಕರೆನಿಸಿದರು. ಇವರ ಏಳಿಗೆಯಲ್ಲಿ ಇವರ ಅರ್ಧಾಂಗಿ (ನನ್ನ ಅವ್ವ) ಶ್ರೀಮತಿ ರಾಜೇಶ್ವರಿ ಅವರಿಗೂ ಅರ್ಧಪಾಲು ಸಲ್ಲಬೇಕು. ನನ್ನ ತಾಯಿಯೂ ಅಷ್ಟೇ ಸರಳ ಸಜ್ಜನಿಕೆಯ ಗುಣದವಳು. ಸಹನೆಯ ಮೂರ್ತಿ, ಪ್ರೇಮಮಯಿ. ಅಹಂಕಾರ ಅವಳ ಹತ್ತಿರ ಸುಳಿಯಲಿಲ್ಲ. ಮಕ್ಕಳ ವಿಷಯದಲ್ಲಿ ತಂದೆ-ತಾಯಿಗಳಿಬ್ಬರೂ ಭಾಗ್ಯಶಾಲಿಗಳು. ಅವರ ನಾಲ್ಕೂ ಜನ ಮಕ್ಕಳು ಮುತ್ತಿನಂತಹವರು. ಬುದ್ಧಿಯಲ್ಲಿ, ಸ್ವಭಾವದಲ್ಲಿ ಅವರು ಬಂಗಾರದಂತಹವರು.

ನಮ್ಮ ತಾಯಿ ನರಸಗೌಡ ರಾಮಗೌಡ ಪಾಟೀಲರ ಮಗಳು.(ಖಡಕಲಾಟ) ಅವರದು ಆಗರ್ಭ ಶ್ರೀಮಂತ ಮನೆತನ. ಅವರ ಆರು ಜನ (ಮೂವರು ಗಂಡು ಮಕ್ಕಳು, ಮೂವರು ಹೆಣ್ಣುಮಕ್ಕಳು) ಮಕ್ಕಳಲ್ಲಿ ನಮ್ಮ ತಾಯಿಯೇ ಹಿರಿಯಳು. ತವರು ಮನೆಯಲ್ಲಿ ಅನುಭವಿಸಿದ ಸುಖ ಸಂತೋಷಗಳಿಗೆ ಗಂಡನ ಮನೆಯಲ್ಲಿಯೂ ಕಡಿಮೆ ಆಗಲಿಲ್ಲ. ನಮ್ಮ ತಂದೆಯವರು ತಾಯಿಯನ್ನು ತುಂಬ ಪ್ರೀತಿ ಗೌರವದಿಂದ ನೋಡಿಕೊಳ್ಳುತ್ತಿದ್ದರು. ಹಳ್ಳಿಯಲ್ಲಿ ಇದ್ದರೂ ಕೂಡ ಸಿನೇಮಾ, ನಾಟಕ, ಕ್ರಿಕೆಟ್ ಮ್ಯಾಚಗಳನ್ನು ನೋಡಲು ಕರೆದುಕೊಂಡು ಹೋಗುತ್ತಿದ್ದರು. ನಾಟಕ ನೋಡಲು ಗೋಕಾಕಕ್ಕೆ, ಸಿನೇಮಾ ನೋಡಲು ಬೆಳಗಾವಿಗೆ ಹೋಗುತ್ತಿದ್ದೆವು. ನಮ್ಮ ತಾಯಿ 'ಕ್ರಿಕೆಟ್ ಮ್ಯಾಚ್ ನನಗೆ ತಿಳಿಯುವುದಿಲ್ಲ' ಎಂದು ಹೇಳಿದರೂ ಕೇಳುತ್ತಿರಲಿಲ್ಲ. 'ನೋಡು ಬಾಯಿ ಜೀವನದಲ್ಲಿ ಹೊಸ ಹೊಸ ಸಂಗತಿಗಳನ್ನು ತಿಳಿದುಕೊಳ್ಳಬೇಕು' ಎಂದು ಪ್ರೋತ್ಸಾಹಿಸುತ್ತಿದ್ದರು. ಒಂದು ಸಲ ಕ್ರಿಕೆಟ್ ಮ್ಯಾಚ ನೋಡಲು ವಿಮಾನ ಮೂಲಕ ಮುಂಬಯಿಗೆ ಕರೆದುಕೊಂಡು ಹೋಗಿದ್ದರು. ಆಧುನಿಕ ಜೀವನದ ಬಗೆಗೆ ಅವರಲ್ಲಿ ಒಲವು ಇತ್ತು. 1981 ರಲ್ಲಿ ಬೆಲ್ಲದಬಾಗೇವಾಡಿಯಲ್ಲಿ ಎಲ್ಲಿಯೂ

ಟಿ.ವಿ. ಇರಲಿಲ್ಲ. ಆಗ ಟಿ.ವಿ. ಖರೀದಿಸಿ ತಂದರು. ಸಿಗ್ನಲ್ ಸಲುವಾಗಿ ತುಂಬಾ ಪ್ರಯತ್ನಪಟ್ಟರು. ಕೊನೆಗೆ ವಿ.ಸಿ.ಆರ್ ತಂದರು. ಕ್ಯಾಸೆಟ್ ಹಾಕಿ ಸಿನೇಮಾ ತೋರಿಸಿದರು.

**ಲಾಲಯೇತ ಪಂಚವರ್ಷಾಣಿ, ದಶ ವರ್ಷಾಣಿ ತಾಡಯೇತ್**
**ಪ್ರಾಪ್ತೇಷು ಷೋಡಷೇ ವರ್ಷ ಸುತಂ ಮಿತ್ರವದಾಚರೇತ್**

ಈ ಶ್ಲೋಕದ ಅರ್ಥವೇನೆಂದರೆ, ಮಕ್ಕಳನ್ನು ಐದು ವರ್ಷಗಳವರೆಗೆ ಮುದ್ದು ಮಾಡಬೇಕು. ಹತ್ತು ವರ್ಷಗಳವರೆಗೆ ದಂಡಿಸಬೇಕು. ಹದಿನಾರು ವರ್ಷಗಳ ನಂತರ ಅವರನ್ನು ಮಿತ್ರರಂತೆ ಪರಿಗಣಿಸಿ ಅದರಂತೆ ವರ್ತಿಸಬೇಕು. ನಮ್ಮ ತಂದೆ–ತಾಯಿ ಈ ಶ್ಲೋಕದ ಮರ್ಮದಂತೆಯೇ ನಮ್ಮನ್ನು ಬೆಳೆಸಿದರು. ತಮ್ಮ ಪ್ರೀತಿ, ವಾತ್ಸಲ್ಯ, ಸ್ನೇಹವನ್ನು ಧಾರೆಯೆರೆದರು.

ಮಡದಿ–ಮಕ್ಕಳಿಗಾಗಿ ಅವರು ದುಡಿದಂತೆಯೇ ಕುಟುಂಬದ ಇತರ ಸದಸ್ಯರ ಬಗೆಗೂ, ಅಕ್ಕ–ತಂಗಿ, ಅಣ್ಣನ ಬಗೆಗೂ ಅವರ ಮಕ್ಕಳ ಬಗೆಗೂ ಅಷ್ಟೇ ಅಕ್ಕರೆಯಿಂದ, ಕಕ್ಕುಲಾತಿಯಿಂದ ನಡೆದುಕೊಳ್ಳುತ್ತಿದ್ದರು. ತಂದೆಯವರದು ನಿಷ್ಕಲ್ಮಷ ಹೃದಯ. ಮನೆಗೆದ್ದು ಮಾರುಗೆಲ್ಲುವ ಉದಾರವಂತಿಕೆ ಅವರದಾಗಿತ್ತು. ಸಾಮಾನ್ಯರೊಂದಿಗೆ ಸಾಮಾನ್ಯರಾಗಿ, ಮಕ್ಕಳೊಂದಿಗೆ ಮಕ್ಕಳಾಗಿ ಬೆರೆಯುವ ಅವರ ಗುಣ ಬಹಳ ಅಪರೂಪವಾಗಿತ್ತು. ಅವರು ಹಣ–ವಶೀಲಿ, ಪ್ರಭಾವಗಳಿಂದ ದೊಡ್ಡವರಾಗಲಿಲ್ಲ. ತಮ್ಮ ಧೀಮಂತ, ನಿಷ್ಕಳಂಕ ಬದುಕಿನಿಂದ ದೊಡ್ಡವರಾದರು. ಸಮಾಜದ ದೊಡ್ಡ ದೊಡ್ಡ ಸ್ಥಾನಗಳನ್ನು ಅಲಂಕರಿಸಿದರು. ಅವರಿಗಿದ್ದ ಜನಪರ ಕಾಳಜಿ ಅವರನ್ನು ಜನನಾಯಕನನ್ನಾಗಿ ರೂಪಿಸಿದವು.

'ಜೀವನದಾಗ ಗಳಿಸೇನು, ಗಳಿಸೇನು ಅಂದ್ರ ಏನ್ರಿ? ಮಂದೀನ ಗಳಿಸಬೇಕು. ಮಂದೀನ ಗಳಿಸೋದು ದೊಡ್ಡದು'. ಈ ಮಾತನ್ನು ಪದೇ ಪದೇ ಹೇಳುತ್ತಿದ್ದರು. ನನ್ನ ಮೇಲೆ ತಂದೆಯವರದು ಅವ್ಯಾಜ ಪ್ರೀತಿ. ನನ್ನ ಆಟ–ಪಾಠಗಳನ್ನು ನೋಡಿ ಸಂತೋಷಿಸುತ್ತಿದ್ದರು. ತಪ್ಪು ತಡಿಗಳಾದರೆ ಅವರೆಂದೂ ನನ್ನನ್ನು ಶಿಕ್ಷಿಸಲಿಲ್ಲ, ಸಿಟ್ಟಿನಿಂದ ಬೈಯಲಿಲ್ಲ. ಅವರ ವಾತ್ಸಲ್ಯದ ಧಾರೆಯಲ್ಲಿ ತೇಲಾಡಿದ ನಾನು ಅದನ್ನು ಮಾತಿನಿಂದ ಹೇಳಲು ಶಕ್ಯವಿಲ್ಲ.

ನಮ್ಮ ಮನೆ ಬಂಧುಬಳಗದಿಂದ ತುಂಬಿರುತ್ತಿತ್ತು. ಸಹಾಯ, ಸಹಕಾರ ಕೇಳಿ ಬರುವ ಜನರಿಂದಲೂ ಮನೆ ಗಿಜಿಬಿಜಿ ಅನ್ನುತ್ತಿತ್ತು. ಇದರಿಂದ ನಮ್ಮ ತಾಯಿಗೆ ಬಿಡುವಿರದ ಕೆಲಸ. ನಮ್ಮದು ಅವಿಭಕ್ತ ಕುಟುಂಬ. ನಾವು, ದೊಡ್ಡಪ್ಪನ

ಮಕ್ಕಳು ಎಲ್ಲರೂ ಕೂಡಿಯೇ ಆಡುತ್ತಿದ್ದೆವು. ಕೂಡಿಯೇ ಅಭ್ಯಾಸ ಮಾಡುತ್ತಿದ್ದೆವು. ಒಬ್ಬರಿಗೊಬ್ಬರು ಸಹಾಯ ಮಾಡುವುದು, ಸಂತೋಷದಿಂದಿರುವುದು ನಮಗೆ ದೇವರು ಕೊಟ್ಟ ದೇಣಿಗೆಯಾಗಿತ್ತು; ನಮ್ಮ ಮನೆಯ ಆ ಜನ ಕಲಿಸಿದ ಪಾಠವಾಗಿತ್ತು. ಅಂದಿನ ನಮ್ಮ ಚಟುವಟಿಕೆಗಳು ಇಂದಿನ ಪರಿಸರದಲ್ಲಿ ನೋಡಲು ಸಿಗುವುದೇ ಇಲ್ಲ. ಅಂದಿನ ಅಪರೂಪದ ದಿನಚರಿ ನಮಗಿಂದು ಸೋಜಿಗವನ್ನುಂಟು ಮಾಡುತ್ತದೆ.

ನಮ್ಮ ತಂದೆಗೆ ದೇವರಲ್ಲಿ ನಂಬಿಕೆ ಕಡಿಮೆ, ಕೊನೆಯವರೆಗೆ ಕಾಯಕವೇ ಕೈಲಾಸ, ಜನರ ಸೇವೆಯೇ ದೇವರು, ನಿಷ್ಠೆಯೇ ದೇವರು, ಸತ್ಯವೇ ದೇವರು ಎಂದು ಅನ್ನುತ್ತಿದ್ದರು. ಅದರಂತೆ ನಡೆಯುತ್ತಿದ್ದರು.

ನಮ್ಮ ಪುಟ್ಟ ಜಗತ್ತಿನಲ್ಲಿ ನಾವು ಓದುವ, ಅಭ್ಯಾಸ ಮಾಡುವ ದಿನಚರಿಗೆ ತುಂಬ ಮಹತ್ವವಿತ್ತು. ಮಕ್ಕಳು ಓದಬೇಕು, ಬಹಳ ಓದಬೇಕು ಎಂಬುದು ನಮ್ಮ ತಂದೆಯವರ ಅದಮ್ಯವಾದ ಬಯಕೆಯಾಗಿತ್ತು. ನಮ್ಮ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಅಷ್ಟಾಗಿ ಓದಿಸುತ್ತಿರಲಿಲ್ಲ. ಅವರನ್ನು ಮದುವೆ ಮಾಡಿ ಕೈ ತೊಳೆದುಕೊಳ್ಳಲು ಹವಣಿಸುತ್ತಿದ್ದರು. ನಮ್ಮ ತಂದೆ ಇದಕ್ಕೆ ವ್ಯತಿರಿಕ್ತರಾಗಿದ್ದರು. ನಮಗೆಲ್ಲ ಒಳ್ಳೆಯ ಶಿಕ್ಷಣ ಕೊಡಿಸುವ ಹಂಬಲ ಹೊತ್ತಿದ್ದರು. ಆದರೇನು ವಿಧಿಯ ಆಟ ಬೇರೆ ಆಗಿತ್ತು. ನಾನು ಕಲಿಯುತ್ತಿದ್ದಾಗಲೇ ಅವರಿಗೆ ಒಂದು ಬಾರಿ ಹೃದಯಾಘಾತದ ಕಂಪನ ಬಂದು ಹೋಗಿತ್ತು. ಆದ್ದರಿಂದ ನನ್ನ ಮದುವೆಗೆ ಅವಸರ ಮಾಡಿದರು.

ಬಾಲ್ಯದಲ್ಲಿ ನಾನು ತಂದೆಯವರ ಜೊತೆಗೆ ಬಹಳ ಆಟ ಕಲಿತಿದ್ದೇನೆ. ಕಣ್ಣು ಮುಚ್ಚಾಲೆ, ಉಪ್ಪು ಕೊಡ ಉಪ್ಪ, ಬಡಗಿ ಆಟ, ಗಿಡಮಂಗನ ಆಟ, ಈಜಾಟ ಮುಂತಾದವು. ಮೇ ತಿಂಗಳ ರಜೆಯಲ್ಲಿ ಅಜ್ಜಿಯ 22 ಮೊಮ್ಮಕ್ಕಳು ಬೆಲ್ಲದ ಬಾಗೇವಾಡಿಯಲ್ಲಿ ಠಿಕಾಣಿ ಹೂಡುತ್ತಿದ್ದರು. ತಂದೆಯವರು ಎಲ್ಲರನ್ನೂ ತೋಟಕ್ಕೆ ಕರೆದುಕೊಂಡು ಹೋಗಿ ಈಜು ಕಲಿಸುತ್ತಿದ್ದರು. ಮಾವಿನ ಹಣ್ಣಿನ ಸುಗ್ಗಿಯಲ್ಲಂತೂ ನಮ್ಮ ಸಡಗರ ಕೇಳುವಂತಿರಲಿಲ್ಲ. ಅಂತಹ ಸಂದರ್ಭದಲ್ಲಿ ತಂದೆಯವರು ಮಕ್ಕಳೊಡನೆ ಮಕ್ಕಳಾಗಿ ಆಡಿ ಆನಂದ ಪಡುತ್ತಿದ್ದರು.

ತಂದೆಯವರ ಕಾರಿನ ಹಾರ್ನ್ ಕೇಳಿದರೆ ಸಾಕು ನಾವೆಲ್ಲ ಆಟ ಬಿಟ್ಟು ಗಡಿಬಿಡಿಯಿಂದ ಮನೆಯೊಳಗೆ ಧಾವಿಸುತ್ತಿದ್ದೆವು. ಇದ್ದ ಬಿದ್ದ ಪುಸ್ತಕ ಹಿಡಿದು ಓದಲು ಕೂಡುತ್ತಿದ್ದೆವು. ನಮ್ಮ ನಾಟಕ ತಂದೆಯವರಿಗೆ ಗೊತ್ತಾಗುತ್ತಿತ್ತು. ನಾವು ಉಲ್ಟಾ ಹಿಡಿದ ಪುಸ್ತಕಗಳನ್ನು ಸರಿಪಡಿಸಿ ಒಳಗೆ ಹೋಗುತ್ತಿದ್ದರು. ಊರಿಂದ ಬರುವಾಗ ಕೇಕ್, ಬಿಸ್ಕಿಟ್, ಹಣ್ಣು ಹಂಪಲ ಏನಾದರೂ ತಂದೇ ತರುತ್ತಿದ್ದರು.

ವಾರಕ್ಕೆರಡು ಸಲ ಸಂಕೇಶ್ವರದ ಸಕ್ಕರೆ ಕಾರಖಾನೆಗೆ ಕರೆದುಕೊಂಡು ಹೋಗುತ್ತಿದ್ದರು. 'ಇವಳು ನನ್ನ ಮಗಳು' ಎಂದು ಅಪ್ಪಣ್ಣಗೌಡರಿಗೆ ಹೆಮ್ಮೆಯಿಂದ ಹೇಳುತ್ತಿದ್ದರು. ಅವರೂ ಬಹಳ ಪ್ರೀತಿ ಮಾಡುತ್ತಿದ್ದರು. 'ನಿನ್ನ ಕಾಲ್ಗುಣದಿಂದಲೇ ನಿಮ್ಮ ಅಪ್ಪ ಫ್ಯಾಕ್ಟರಿಗೆ ಬಂದರು (1963)' ಎಂದು ನಕ್ಕು ಹೇಳುತ್ತಿದ್ದರು.

ನನ್ನ ಮದುವೆಯ ವಿಷಯದಲ್ಲಿ ತಂದೆಯವರು ಹೇಳಿದ ಒಂದು ಮಾತು ನನಗಿನ್ನೂ ನೆನಪಿದೆ. "ನನಗ ಬಡವ-ಶ್ರೀಮಂತ ಮುಖ್ಯ ಅಲ್ಲ, ರೂಪ-ಲಾವಣ್ಯ ಮುಖ್ಯ ಅಲ್ಲ. ಹುಡುಗ ಬುದ್ಧಿವಂತ ಇರಬೇಕು" ಅಂತಹ ವರನನ್ನೇ ಅವರು ಹುಡುಕಿದರು. ಅವರೇ ಡಾ. ಎ.ಎ. ಪಾಂಗಿ ಅವರು ವಿದ್ಯಾರ್ಥಿ ಜೀವನದಲ್ಲಿ ಬಂಗಾರದ ಪದಕ ಪಡೆದು ಪಾಸಾಗಿದ್ದರು. ಅಂತಹ ಪ್ರತಿಭಾವಂತ ಪತಿ ದೊರೆತದ್ದು ನನ್ನ ಸುದೈವ. ಅವರೊಡನೆ ಇದ್ದಾಗ ತಂದೆಯವರ ಕಣ್ಣಂಚಿನಲ್ಲಿ ಸಂತೋಷದ ಕಣ್ಣೀರನ್ನು ನೋಡಿದ್ದೇನೆ.

ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮೊಮ್ಮಕ್ಕಳ ಒಡನಾಟದಲ್ಲಿ ಅವರು ಮಕ್ಕಳಾಗಿ ಕರಗಿ ಹೋಗುತ್ತಿದ್ದರು. ಸಣ್ಣ ಸಣ್ಣ ವಿಷಯಗಳಲ್ಲಿಯೂ ಸಂಭ್ರಮಪಟ್ಟು ಸಂತೋಷಿಸುತ್ತಿದ್ದರು. ನಮಗೆಲ್ಲ ಅವರ ಮಾತು ಕೇಳುವುದೇ ಮೋಜಿನ ಅನುಭವ. ಅನೇಕ ಹಳೆಯ ವಿಷಯಗಳನ್ನು ಕತೆ ಮಾಡಿ ಸ್ವಾರಸ್ಯಕರವಾಗಿ ಹೇಳುತ್ತಿದ್ದರು. ಮಾತು ಮಾತಿನಲ್ಲಿ ನಗೆಯ ಬುಗ್ಗೆ ಚಿಮ್ಮಬೇಕು. ಅವರ ಜೊತೆಯಲ್ಲಿದ್ದಾಗ ಹೊತ್ತು ಸರಿದದ್ದು ಗೊತ್ತೇ ಆಗುತ್ತಿರಲಿಲ್ಲ. ಮಾತಿನಂದ ಮೋಡಿ ಮಾಡುವ ಕಲೆ ಅವರಿಗೆ ದೈವದತ್ತವಾಗಿತ್ತು. ಪ್ರೀತಿ-ವಾತ್ಸಲ್ಯ ಅವರ ಅಂತಃಕರಣಕ್ಕೆ ಅಂಟಿದ ಮಾತಾಗಿತ್ತು. ಸದಾ ಹಸನ್ಮುಖಿ. ಹೊಸ ಹೊಸ ಜೋಕುಗಳನ್ನೂ ಹೇಳುತ್ತಿದ್ದರು. ಮನೆಯಲ್ಲಿ ಬಂಧು ಬಳಗದವರಿದ್ದರೆ ಅವರಿಗೆ ಇನ್ನೂ ಉಮೇದು. ಎಂದೂ ಕುಂದದ ಉತ್ಸಾಹ, ಆನಂದ ಸಂಭ್ರಮ ಪಡುವ ರೀತಿ ನಕ್ಕು ನಗಿಸುವ ಪ್ರೀತಿ- ಅವರದೇ ವಿಶೇಷ.

ನನ್ನ ಮದುವೆ ಕೂಡ ಬಲು ಸಡಗರದಿಂದ, ಸಂಭ್ರಮದಿಂದ ಮಾಡಿದರು. ಸುತ್ತಲೂ ಹಳ್ಳಿಗಳಿಗೆ ಐದು ದಿನ 'ಊರ-ಊಟ' ಹಾಕಿಸಿದರು. ಹುಕ್ಕೇರಿ ತಾಲೂಕಿನ ಜನ ಆ ಮದುವೆಯನ್ನು ಇನ್ನೂ ನೆನೆಸುತ್ತಾರೆ.

ಬೆಲ್ಲದ ಬಾಗೇವಾಡಿಯಲ್ಲಿ ನನಗ ಟಾಯಂಪಾಸ್ ಅಂದರೆ ಕತೆ ಕಾದಂಬರಿಗಳನ್ನು ಓದುವುದು. ತಂದೆಯವರು ಎಸ್.ಎಲ್.ಭೈರಪ್ಪ, ದ.ರಾ.ಬೇಂದ್ರೆ, ಬೀಚಿ ಮುಂತಾದವರ ಸಾಹಿತ್ಯ ಓದುತ್ತಿದ್ದರು. ಅವರು ಓದಿ ಮೆಚ್ಚಿಕೊಂಡ

ಪುಸ್ತಕಗಳನ್ನು ಓದಲು ನನಗೆ ಹೇಳುತ್ತಿದ್ದರು. ಬೆಳಗಾವಿಯ ಸಾರ್ವಜನಿಕ ಗ್ರಂಥಾಲಯದಿಂದಲೂ ಓದಲು ಪುಸ್ತಕಗಳನ್ನು ತರುತ್ತಿದ್ದರು. 'ಹೆತ್ತವರ ಆದರ್ಶ ಮಕ್ಕಳಲ್ಲಿ ಪ್ರತಿಬಿಂಬಿಸಬೇಕು. ಮಕ್ಕಳಿಗೆ ಮನೆಯೇ ಮೊದಲ ಪಾಠಶಾಲೆಯಾಗಬೇಕು. ಇದುವೇ ನಮ್ಮ ಸಂಸ್ಕೃತಿ' ಎಂದು ಹೇಳುತ್ತಿದ್ದರು.

ನಾನು ಗರ್ಭಿಣಿ ಇದ್ದಾಗ ದಿನಾಲೂ ನನಗೆ 'ನಿನಗೆ ಏನು ಬೇಕು, ಏನು ಬೇಕು' ಎಂದು ಕೇಳುತ್ತಿದ್ದರು. ಒಂದು ದಿನ ಅವರಿಗೆ ಏನೋ ಅನುಮಾನ. ಮನಸ್ಸಿನ ಮಾತು ಹೇಳಿಕೊಳ್ಳಲು ಹಿಂಜರಿಯುತ್ತಿದ್ದಾಳೆ ಅನಿಸಿತು. ಕರೆದು ಹೀಗೆ ಹೇಳಿದರು. 'ಮಗನ (ಅವ್ವಾ ಎಂದೂ ಕರೆಯುತ್ತಿದ್ದರು) ನಿನಗ ಏನು ಬೇಕು ಹೇಳು. ಅಂಜಬ್ಯಾಡ. ನಿನಗೆ ಬೇಕು ಅನಸಿದರ 'ಹುಲಿಯ ಹಾಲ' ತಂದು ಕೊಡತೇನ' ಅಂದರು. ನಿಜ ಹೇಳಬೇಕೆಂದರೆ ನನಗೆ ಆಗ ಮಾವಿನ ಹಣ್ಣು ತಿನ್ನುವ ಬಯಕೆ ಆಗಿತ್ತು. ತಂದೆಯವರ ಒತ್ತಾಸೆಯ ಮೇರೆಗೆ 'ನನಗ ಮಾವಿನ ಹಣ್ಣು ತಿನ್ನುವ ಬಯಕೆ' ಎಂದೆ. ಅದು ಅಕ್ಟೋಬರ್, ನವೆಂಬರ್ ತಿಂಗಳಾಗಿತ್ತು. ಹೇಳಿದ ನಾಲ್ಕು ದಿನಗಳಲ್ಲಿಯೇ ಅವರು ಮುಂಬಯಿಂದ ಮಾವಿನಹಣ್ಣಿನ ಬುಟ್ಟಿ ತರಿಸಿ ಕೊಟ್ಟರು. ಉಳಿದ ಕಡೆಗೆ ಆ ಹಣ್ಣುಗಳು ಸಿಗುತ್ತಿರಲಿಲ್ಲ ಕುಬಸದ ಕಾರ್ಯಕ್ರಮದಲ್ಲಿಯೂ 'ಅಪ್ಪ' ಅತ್ಯಂತ ಸಂಭ್ರಮದಿಂದ ಓಡಾಡಿದರು.

ಅವರಿಗೆ ಎಣಿಗಾಯಿ ಬದನೆಕಾಯಿ, ರೊಟ್ಟಿ, ಝುಣಕಾ ಅಂದರೆ ಪ್ರೀತಿಯ ಊಟ. ಅಡಿಗೆಯಲ್ಲಿ ಈ ಪರಿಕರಗಳಿದ್ದರೆ 'ಮಸ್ತ ಆಗೇದ ಅಡಿಗೆ' ಎಂದು ಬಾಯಿ ಚಪ್ಪರಿಸಿ, ಪ್ರೀತಿಯಿಂದ ಉಣ್ಣುತ್ತಿದ್ದರು. ಅವರು ಒಬ್ಬರೇ ಎಂದೂ ಊಟ ಮಾಡುತ್ತಿರಲಿಲ್ಲ. ಜೊತೆಗಿದ್ದವರನ್ನೆಲ್ಲ ಕರೆದುಕೊಂಡು, ಹರಟೆ ಹೊಡೆಯುತ್ತ ಆನಂದದಿಂದ ಉಣ್ಣುತ್ತಿದ್ದರು. ನನ್ನ ಅಣ್ಣ-ತಮ್ಮ ಒಂದಿಷ್ಟು ಹಟ ಮಾಡಿದರೂ ಪ್ರೀತಿಯಿಂದ ಗದರಿಸಿ ಕರೆದು ಮುದ್ದಿನಿಂದ ಉಣಿಸುತ್ತಿದ್ದರು. ಮಕ್ಕಳನ್ನು ಬಿಟ್ಟು ಊಟ ಮಾಡುತ್ತಿರಲಿಲ್ಲ.

ಹೆರಿಗೆ ಸಮಯದಲ್ಲಿ ನನಗೆ ತುಂಬ ಧೈರ್ಯಕೊಟ್ಟರು. ಆದರೆ ಒಳಗೊಳಗೆ ಅವರಿಗೆ ಆತಂಕವಿತ್ತು. ಅದು ಅವರ ಮುಖದಲ್ಲಿ ಕಾಣುತ್ತಿತ್ತು. ಅಳಿಯ ಬಂದು ಹೇಳಿದಾಗ ಅವರ ಹರುಷ ಮುಗಿಲ ಮುಟ್ಟಿತಂತೆ. ಮೊಮ್ಮಗಳ ಆಗಮನದಿಂದ ಅವರು ತುಂಬಾ ಖುಷಿ ಪಟ್ಟರು. ನನ್ನ ಮಗಳು ಲಕ್ಷ್ಮೀಗೆ ಅವರು 'ಲಚ್ಚಿ' 'ಲಚ್ಚಿ' ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ಕೈಯೊಳಗಿನ ಕೂಸನ್ನು (ಲಕ್ಷ್ಮೀ) ಕೆಳಗೆ ಇಳಿಸುತ್ತಿರಲಿಲ್ಲ. ಮಗಳನ್ನು ಕರೆದುಕೊಂಡು ನಾನು ಬೆಲ್ಲದ ಬಾಗೇವಾಡಿಯಿಂದ

ಅಥಣಿಗೆ ಬರುವಾಗ ಅವರಿಗೆ ಬಹಳ ದುಃಖವಾಗಿತ್ತು. 'ಮೊಮ್ಮಗಳನ್ನು ಕಳಸಾಕ ಮನಸ ಆಗವಲ್ದು' ಎಂದರು. 'ನಾನು ನಮ್ಮ ಅಣ್ಣನ ಮದುವೆ ಬೇಗ ಮಾಡುವೆ' ಎಂದು ಹೇಳಿದರು.

ತಂದೆಯವರು ಜೀವನದಲ್ಲಿ ಹೆಚ್ಚು ಹಣ ಸಂಪಾದಿಸಲಿಲ್ಲ. ಜನರ ಪ್ರೀತಿ ಗೌರವ ಗಳಿಸಿದರು. ಅವರ ಮನೆತನದಿಂದ ಸಾಹುಕಾರರಾಗಿದ್ದರು. ಹೀಗಾಗಿ ಹಣದ ಕೊರತೆಯೂ ಬೀಳಲಿಲ್ಲ. ಒಂದರ್ಥದಲ್ಲಿ ನಮ್ಮ ಮನೆ ನಂದಗೋಕುಲವಾಗಿತ್ತು. ಎಲ್ಲ ಮಕ್ಕಳು ತಂದೆ ತಾಯಂದಿರನ್ನು ಗೌರವಿಸುತ್ತಾರೆ. ಅವರೊಡನೆ ನಾವು ಹೊರತಲ್ಲ. ಸ್ನೇಹಿತರಂತೆ ನಾವು ಕಾಲ ಕಳೆದವು. ತಂದೆ-ತಾಯಿ ಇಬ್ಬರದೂ ದೊಡ್ಡ ಬಳಗವಿತ್ತು. ತಂದೆಯವರು ಎಲ್ಲ ಸಂಬಂಧಿಕರನ್ನು ತುಂಬಾ ಹಚ್ಚಿಕೊಳ್ಳುತ್ತಿದ್ದರು. ಎಲ್ಲರೊಡನೆ ಸುಖ-ದುಃಖ ಹಂಚಿಕೊಳ್ಳುತ್ತಿದ್ದರು. ಕಷ್ಟದಲ್ಲಿದ್ದವರಿಗೆ ಸಹಾಯ ಮಾಡುತ್ತಿದ್ದರು. ಇವರ ಗುಣಕ್ಕೆ ಸಂಬಂಧಿಕರಿಂದ ಸ್ನೇಹಿತರಿಂದ ನಮ್ಮ ಮನೆ ಯಾವಾಗಲೂ ತುಂಬಿರುತ್ತಿತ್ತು. ತಾಯಿ ಬಂದವರ ಊಟ ಉಪಚಾರದಲ್ಲಿ ತೊಡಗಿರುತ್ತಿದ್ದರು.

ತಂದೆಯವರು ಉತ್ಸಾಹದ ಚಿಲುಮೆಯಾಗಿದ್ದರು. ಯಾವುದೇ ಕೆಲಸಕ್ಕೆ ಹಿಂದೆ ಬೀಳುತ್ತಿರಲಿಲ್ಲ. ಮಾತಿನಲ್ಲಿ ಸ್ಪಷ್ಟವಾದಿ. ಯಾವುದನ್ನೂ ಮುಚ್ಚು ಮರೆ ಇಲ್ಲದೆ ಮುಖದ ಮೇಲೆ ಹೇಳಿಬಿಡುತ್ತಿದ್ದರು. ಅವರ ನಿಷ್ಠುರ ನಿಲುವು ನನಗೆ ತುಂಬಾ ಮೆಚ್ಚುಗೆಯಾಗಿತ್ತು. ನುಡಿದಂತೆಯೇ ನಡೆಯುವ ಸರಳಜೀವಿ ಕೂಡ. ಬಡವರ ಬಗೆಗೆ ಬತ್ತದ ಪ್ರೀತಿ. ಯಾವುದೇ ಪ್ರತಿಫಲ ಬಯಸದೆ ಅವರ ಸೇವೆಯಲ್ಲಿ ತೊಡಗುತ್ತಿದ್ದರು. ಹುಕ್ಕೇರಿ, ಸಂಕೇಶ್ವರ ಪರಿಸರದಲ್ಲಿ ಅವರು ಬಿತ್ತಿದ ಆದರ್ಶ ಗುಣಗಳು, ಇವತ್ತಿಗೂ ಕೆಲವರಲ್ಲಿ ಕಾಣುತ್ತೇವೆ.

ತಂದೆಯವರ ಪ್ರೀತಿ ನನ್ನ ಪಾಲಿಗೆ ಮರೆಯಲಾಗದ ಸಂಜೀವಿನಿ. ಅವರ ಮಗಳು ಎಂದು ಹೇಳಿಕೊಳ್ಳಲು ಹೃದಯ ತುಂಬಿ ಬರುತ್ತದೆ. ಅವರು ನಮ್ಮ ಮಧ್ಯೆ ಇರದಿದ್ದರೂ ನಾನು ಇಡುವ ಪ್ರತಿ ಹೆಜ್ಜೆಯಲ್ಲಿಯೂ ಅವರ ನೆನಪು ಇರುತ್ತದೆ. ಅವರನ್ನು ಮನದಲ್ಲಿ ನೆನೆದು, ನಮಿಸಿ ಮುಂದುವರೆಯುತ್ತೇನೆ. ಈ ದಿವ್ಯಚೇತನದಿಂದ ಸ್ಫೂರ್ತಿ ಪಡೆದ ಸಾವಿರಾರು ಜನರು ಇವರನ್ನು ನೆನೆದು ಸೇವೆಗೆ ಸಿದ್ಧರಾಗುತ್ತಾರೆ. ಇವರು ಮಾಡಿದ ಪುಣ್ಯದ ಫಲದಿಮದಲೇ ಮಕ್ಕಳಾದರೂ ಸಾಧನೆಯ ಹಾದಿಯಲ್ಲಿ ಉನ್ನತ ಶಿಖರ ಏರಿದ್ದಾರೆ.

ಮಕ್ಕಳೆಲ್ಲ ಒಳ್ಳೆಯ ಸ್ಥಾನದಲ್ಲಿದ್ದಾರೆ. ಅಳಿಯಂದಿರಿಬ್ಬರೂ ಪರಿಶ್ರಮಪಟ್ಟು ದುಡಿದು ದೊಡ್ಡ ಆಸ್ಪತ್ರೆ ಮತ್ತು ದೊಡ್ಡ ಕಂಪನಿ ಕಟ್ಟಿ ಹೆಸರು ಗಳಿಸಿದ್ದಾರೆ. ಮೊಮ್ಮಕ್ಕಳು ಸಹ ಅದೇ ದಾರಿಯಲ್ಲಿ ಹೆಜ್ಜೆ ಹಾಕುತ್ತಿದ್ದಾರೆ. ತಂದೆಯವರ ಹಾಗೆಯೇ ಉಮೇಶ ಅಣ್ಣಾ, ರಮೇಶ ತಮ್ಮಾ ಇಬ್ಬರೂ ರಾಜಕೀಯ ರಂಗದಲ್ಲಿ ಜನಪ್ರಿಯ ನಾಯಕರಾಗಿ ಕತ್ತಿ ಮನೆತನದ ಕೀರ್ತಿಗೆ ಕಳಶಪ್ರಾಯರಾಗಿದ್ದಾರೆ. ತಂದೆಯವರು ಕಟ್ಟಿ ಬೆಳೆಸಿದ ಸಂಸ್ಥೆಗಳ ನೇತೃತ್ವವಹಿಸಿದ್ದಾರೆ. ಇವರ ಮಾರ್ಗದರ್ಶನದಲ್ಲಿಯೂ ಜನಪರ ಚಟುವಟಿಕೆಗಳು ಮುನ್ನಡೆದಿವೆ. ಅಣ್ಣಾ–ತಮ್ಮ ಇಬ್ಬರೂ ಕಷ್ಟಪಟ್ಟು ದುಡಿಯುತ್ತಿದ್ದಾರೆ. ಉಮೇಶ ಅಣ್ಣಾ ಸಚಿವರಾಗಿ ಬಿಡುವಿಲ್ಲದೆ ಜನಸೇವೆಯಲ್ಲಿ ತೊಡಗಿದ್ದಾರೆ. ರಮೇಶ ತಮ್ಮಾ ಸಂಸದರಾಗಿದ್ದಾರೆ. ತಂದೆಗೆ ತಕ್ಕ ಮಕ್ಕಳೆನಿಸಿ ಕೊಂಡಿದ್ದಾರೆ. ತಂದೆಯವರ ಹೆಸರು ಉಳಿಯುವಂತೆ ಸಕ್ಕರೆ ಕಾರ್ಖಾನೆ ಮತ್ತು ಕೆ.ಎಲ್.ಇ. ಸಂಸ್ಥೆಯ ದಂತ ಮಹಾವಿದ್ಯಾಲಯಕ್ಕೆ 'ವಿಶ್ವನಾಥ ಕತ್ತಿ' ಎಂದು ಹೆಸರಿಟ್ಟು, ತಂದೆಯವರ ಹೆಸರನ್ನು ಅಮರಗೊಳಿಸಿದ್ದಾರೆ.

ನಮ್ಮ ತಂದೆ ಯಾರಿಗೂ ತೊಂದರೆ ಕೊಡದೆ ಕರ್ಮಯೋಗಿಯಂತೆ ಕಾಯಕನಿರತರಾಗಿದ್ದಾಗಲೇ ಅವರು ಪರಮಾತ್ಮನ ಸನ್ನಿಧಿ ಸೇರಿದರು. ಕಾಯಕಯೋಗಿಯಾಗಿ ಇಹಲೋಕವನ್ನು ತ್ಯಜಿಸಿದರು. 'ಕಾಯಕವೇ ಕೈಲಾಸ' ಎಂಬ ಆದರ್ಶವನ್ನು ಅವರ ಜೀವನದಲ್ಲಿಯೂ ಮರಣದಲ್ಲಿಯೂ ಕಾಣುವಂತಾಯಿತು.

ಜನರಿಗೆ ಪ್ರಿಯವಾದ ವ್ಯಕ್ತಿ ದೇವರಿಗೂ ಪ್ರಿಯನಂತೆ ವಿಧಿಯ ಕೈವಾಡದ ಎದುರು ನಿಲ್ಲುವರಾರು? ಇದಕ್ಕಿಂತಲೂ ಒಳ್ಳೆಯ ಮರಣ ಬರಲು ಸಾಧ್ಯವೇ ಇಲ್ಲ. 'ಶರಣರ ಮಹಿಮೆ ಮರಣದಲ್ಲಿ ನೋಡು' ಎಂಬಂತೆ, ತಂದೆಯವರ ವ್ಯಕ್ತಿತ್ವ ಶರಣರ ವ್ಯಕ್ತಿತ್ವವೇ ಆಗಿತ್ತು.

ಪೂರ್ಣಿಮಾ ಅ. ಪಾಂಗಿ
ಅಥಣಿ

# ಸದನದ ಶ್ರದ್ಧಾಂಜಲಿ

## ಶ್ರೀ ವಿಶ್ವನಾಥ ಕತ್ತಿ ಅವರ ನಿಧನಕ್ಕೆ ಸದನ ವ್ಯಕ್ತಪಡಿಸಿದ ಶೋಕ ಸಂದೇಶಗಳು

### ಶ್ರೀ ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿಗಳು)

ಮಾನ್ಯ ಅಧ್ಯಕ್ಷರೇ, ಇದಂತೂ ಒಂದು ಕಲ್ಪನಾತೀತವಾದ ಘಟನೆಯಾಗಿದೆ. ಈ ಸದನದಲ್ಲಿ ನಮ್ಮೆಲ್ಲರ ಹಾಗೆ ಕಾರ್ಯಕಲಾಪಗಳಲ್ಲಿ ಭಾಗವಹಿಸಲಿಕ್ಕೆ ಬಂದಂತಹ ನನ್ನ ಮಿತ್ರರು ಮತ್ತು ಮಾನ್ಯ ಶಾಸಕರಾದ ಶ್ರೀ ವಿಶ್ವನಾಥ ಕತ್ತಿಯವರು ಈಗ ಇಲ್ಲವಾಗಿದ್ದಾರೆ. ನಮ್ಮ ಜೀವ ಎಷ್ಟರ ಮಟ್ಟಿಗೆ ನಶ್ವರವಾದುದು ಎಂದು ಅರ್ಥವಾಗುತ್ತದೆ. ನಾವು ದೊಡ್ಡ ದೊಡ್ಡ ಕನಸು ಕಾಣುತ್ತಿರುತ್ತೇವೆ. ಇವರ ನಿಧನದಿಂದ ನನಗೆ ಅತೀವ ದುಃಖವಾಗಿದೆ. ಕೇವಲ ನನಗೆ ಸ್ನೇಹಿತರಾಗಿದ್ದರು ಎನ್ನತಕ್ಕ ದೃಷ್ಟಿಯಿಂದಲ್ಲ ಅವರು ಅತ್ಯಂತ ಮೃದು ಸ್ವಭಾವದವರು ಮತ್ತು ಪ್ರೇಮ ಸ್ವಭಾವದವರು. ಅವರು ಅನೇಕ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಸಹಕಾರೀ ಕ್ಷೇತ್ರ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಕರ್ನಾಟಕ ಲಿಬರಲ್ ಎಜ್ಯುಕೇಶನ ಸೊಸೈಟಿಯಲ್ಲಿ ಅಧ್ಯಕ್ಷರಾಗಿ ಉತ್ತಮ ಕೆಲಸ ಮಾಡಿದ್ದಾರೆ. ಸಂಕೇಶ್ವರ ಸಹಕಾರ ಸಕ್ಕರೆ ಕಾರ್ಖಾನೆಯ ಜೊತೆಯಲ್ಲಿ ಅನೇಕ ವರ್ಷಗಳ ಕಾಲ ಸಂಬಂಧ ಇದೆ. ಮತ್ತು ವಿಧಾನ ಪರಿಷತ್ತಿನ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಈ ಸಲದ ಚುನಾವಣೆಯಲ್ಲಿ ಹುಕ್ಕೇರಿಯಿಂದ ಆರಿಸಿ ಬಂದು ಈ ಸಭೆಯ ಶಾಸಕರಾಗಿ ಮೂರು ದಿವಸ ಕೂಡ ಭಾಗವಹಿಸಲಿಕ್ಕೆ ಸಾಧ್ಯವಾಗಲಿಲ್ಲ. ನಮ್ಮೆಲ್ಲರ ಅಶ್ರುತರ್ಪಣ ಅವರ ಮನೆಯವರಿಗೆ ಮತ್ತು ಸಂಬಂಧಿಕರಿಗೆ ಹಾಗೂ ಇನ್ನಿತರ ಸ್ನೇಹಿತರಿಗೆ ಹೋಗುತ್ತದೆ. ಅವರ ನಿಧನದಿಂದ ಆದಂತಹ ಹಾನಿಯಲ್ಲಿ ನಷ್ಟದಲ್ಲಿ ನಾವು ಭಾಗಿಯಾಗಿದ್ದೇವೆ. ಅಂತಹವರನ್ನು ನಾವು ಪುನಃ ಪಡೆಯುವುದಕ್ಕೆ ಸಾಧ್ಯವಾಗುದಿಲ್ಲ. ಅವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಕೊಡಲಿ ಮತ್ತು ಅವರ ನಿಧನದಿಂದ ಉಂಟಾಗುವ ದುಃಖವನ್ನು ಸಹಿಸತಕ್ಕ ಶಕ್ತಿಯನ್ನು ಅವರ ಮನೆಯವರಿಗೆ ಕೊಡಲಿ ಎಂದು ಹೇಳಿ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಎಸ್. ಬಂಗಾರಪ್ಪ**–ಸನ್ಮಾನ್ಯ ಸಭಾಧ್ಯಕ್ಷರೇ, ಸಭಾನಾಯಕರು ಹೇಳಿದ ಹಾಗೆ ಸದನದ ಮಾನ್ಯ ಸದಸ್ಯರಾದ ಶ್ರೀ ವಿಶ್ವನಾಥ ಕತ್ತಿಯವರನ್ನು ತತ್‌ಕ್ಷಣದಲ್ಲಿ ಕಳೆದುಕೊಂಡಿದ್ದೇವೆ. ಮನುಷ್ಯ ಹುಟ್ಟಿದ ಮೇಲೆ ಸಾಯುವುದು ಸಹಜ. ಸಾವಿಗೆ ಯಾವ ಸಂದರ್ಭ ಎಲ್ಲಿ ಯಾವ ಕಾಲಕ್ಕೆ ಬರುತ್ತದೆ ಎಂಬ ಗುರುತನ್ನು ಹಾಕುವುದಕ್ಕೆ

ಸಾಧ್ಯವಿಲ್ಲ. ಇಂತಹ ಸಂದರ್ಭದಲ್ಲಿ ಒಬ್ಬ ವ್ಯಕ್ತಿಯನ್ನು ಅಗಲಿದಾಗ ನಾವು ತುಂಬಾ ನೋವನ್ನು ಅನುಭವಿಸಬೇಕಾಗುತ್ತದೆ. ಪ್ರಮಾಣ ವಚನ ತೆಗೆದುಕೊಂಡು ಕೇವಲ ಕೆಲವೇ ದಿನಗಳು ಶಾಸಕರಾಗಿದ್ದರು ಈಗ ಅವರು ಇಲ್ಲದಂತಾಗಿದೆ. ನಮಗಿಂತ ಹೆಚ್ಚಿಗೆ ಅವರ ಕುಟುಂಬದವರಿಗೆ ಮತ್ತು ಅವರ ಕ್ಷೇತ್ರದ ಜನತೆಗೆ ದೊಡ್ಡ ಹಾನಿಯಾಗಿದೆ. ಮತ್ತು ಯಾವ ಕ್ಷೇತ್ರದಲ್ಲಿ ಒಬ್ಬ ವ್ಯಕ್ತಿ ಅಪಾರ ಸೇವೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಲ್ಲಿಸಿರುತ್ತಾರೆ. ಆ ಕ್ಷೇತ್ರದ ಜನತೆಗೆ ಮಹಾ ಹಾನಿಯಾಗಿರುತ್ತದೆ. ಅವರು ಕರ್ನಾಟಕ ಲಿಬರಲ್ ಎಜ್ಯುಕೇಶನ ಸೊಸೈಟಿಯ ಅಧ್ಯಕ್ಷರಾಗಿದ್ದರು ಎನ್ನತಕ್ಕಂತಹ ಅಂಶ ನನಗೆ ಈಗ ತಾನೆ ಗೊತ್ತಾಯಿತು. ಅನೇಕ ಜನ ಮಾನ್ಯ ಸದಸ್ಯರು ಹೊಸದಾಗಿ ಬಂದ ಸಂದರ್ಭದಲ್ಲಿ ಅವರ ಹೆಸರನ್ನು ತಿಳಿಯತಕ್ಕ ಸಂದರ್ಭ ಇದೀಗ ತಾನೇ ಬಂದಿತು. ಶ್ರೀಮಾನ್ ವಿಶ್ವನಾಥ ಕತ್ತಿಯವರು ನಮ್ಮ ಜೊತೆಗಿದ್ದು ಸಂಪೂರ್ಣವಾಗಿ ಜನಗಳ ಸೇವೆಯನ್ನು ಸಲ್ಲಿಸಬೇಕಾಗಿತ್ತು. ಅವರು ತುಂಬಾ ಒಳ್ಳೆಯವರು ಎನ್ನತಕ್ಕ ವಿಚಾರ ಕೇಳಿದ್ದೆನು. ಶ್ರೀಮತಿ ನಾಗರತ್ನಮ್ಮನವರು ಈಗ ತಾನೆ ಹೇಳಿದರು ನನಗೆ ಅವರು ಯಾರು ಎನ್ನುವ ಮುಖತಃ ಭೇಟಿ ಇಲ್ಲದಿದ್ದರೂ ಕೂಡ ಒಂದು ಒಳ್ಳೆಯ ಕೆಲಸಕ್ಕೆ ದೂರವಾಣಿ ಮುಖಾಂತರ ಪ್ರಸ್ತಾಪ ಮಾಡಿದರೆ ತಕ್ಷಣ ಸಹಾಯ ಮಾಡುತ್ತಿದ್ದರು ಎನ್ನುವ ವಿಚಾರವನ್ನು ವ್ಯಕ್ತಪಡಿಸಿದರು. ಅಂತಹ ವ್ಯಕ್ತಿಯನ್ನು ಅಗಲಿದ ಸಾರ್ವಜನಕ ಕ್ಷೇತ್ರಕ್ಕೆ ತುಂಬಲಾರದ ನಷ್ಟವಾಗಿದೆ. ಇಂತಹ ನಷ್ಟವನ್ನು ಅನುಭವಿಸತಕ್ಕ ಸಂದರ್ಭದಲ್ಲಿ ಈ ಸನದ ಸದಸ್ಯರುಗಳು ಮತ್ತು ನಾವು ಕೂಡ ಭಾಗಿಯಾಗಿದ್ದೇವೆ. ಅವರನ್ನು ಅಗಲಿದ ಅವರ ಕುಟುಂಬದವರಿಗೆ ಭಗವಂತನು ಶಾಂತಿಯನ್ನು ಕೊಡಲೆಂದು ನಾನು ಪ್ರಾರ್ಥನೆ ಮಾಡುತ್ತೇನೆ. ಶ್ರೀ ವಿಶ್ವನಾಥ ಕತ್ತಿಯವರ ಆತ್ಮಕ್ಕೆ ಶಾಂತಿಯನ್ನು ಕೊಡಲಿ ಎನ್ನುವ ಅಭಿಪ್ರಾಯವನ್ನು ಸಭಾನಾಯಕರು ಹೇಳಿದ ಹಾಗೆ ನಾನು ಕೂಡ ಈ ಸಂದರ್ಭದಲ್ಲಿ ವ್ಯಕ್ತಪಡಿಸಿ ಅವರ ಆತ್ಮಕ್ಕೆ ಭಗವಂತನು ಶಾಂತಿಯನ್ನು ಕೊಡಲೆಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಕೆ.ಎಚ್. ಪಾಟೀಲ**–ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ವಿಶ್ವನಾಥ ಕತ್ತಿಯವರ ಪರಿಚಯ ನನಗೆ ಬಹಳ ದಿವಸಗಳಿಂದ ಇತ್ತು. ಕರ್ನಾಟಕ ಲಿಬರಲ್ ಎಜ್ಯುಕೇಶನ್ ಸೊಸೈಟಿಯ ಅಧ್ಯಕ್ಷರಾಗಿದ್ದು ಅನೇಕ ಸಹಕಾರಿ ಕ್ಷೇತ್ರದಲ್ಲಿ ದುಡಿದಿದ್ದಾರೆ. ಇವರ ಸಾವಿನಿಂದ ನಾವು ಅಪಾರ ನಷ್ಟವನ್ನು ಅನುಭವಿಸಬೇಕಾಗಿದೆ. ಮಾನ್ಯ ನಾಯಕರು ಹೇಳಿದ ಹಾಗೆ ಅವರು ಸಾವು ತತ್‌ಕ್ಷಣ ಉಂಟಾಗಿರುವುದರಿಂದ ಇದೊಂದು ಆಶ್ಚರ್ಯಕರವಾಗಿದೆ. ದೇವರು ಒಳ್ಳೆಯವರನ್ನು ಬೇಗ ಕರೆದುಕೊಳ್ಳುತ್ತಾನೆ ಎನ್ನುವುದಕ್ಕೆ

ಇದು ಸಾಕ್ಷಿಯಾಗಿದೆ. ಅವರ ಕುಟುಂಬಕ್ಕೆ ಉಂಟಾಗಿರುವ ದುಃಖವನ್ನು ಸಹಿಸತಕ್ಕ ಶಕ್ತಿಯನ್ನು ಭಗವಂತನು ಕೊಡಲಿ ಎಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಡಿ.ಜಿ.ಬಸವನಗೌಡ**–ಮಾನ್ಯ ಅಧ್ಯಕ್ಷರೇ, ಈ ದಿವಸ ಮಾನ್ಯ ಸದಸ್ಯರಾದ ಶ್ರೀ ವಿಶ್ವನಾಥ ಕತ್ತಿಯವರು ಸದನದಲ್ಲೇ ಹೃದಯಾಘಾತದಿಂದ ನಿಧನ ಹೊಂದಿದರು. ಇವರನ್ನು ನಾನು 10 ವರ್ಷಗಳಿಂದ ಚೆನ್ನಾಗಿ ಬಲ್ಲವನಾಗಿದ್ದೇನೆ. ಮೊನ್ನೆ ದಿವಸ ಅವರು ಮಾತನಾಡಿದ ಶಬ್ದಗಳು ಇನ್ನೂ ನೆನಪಿನಲ್ಲಿ ಇವೆ. ನಾನು ಬೆಳಗಾಮ್‌ನಲ್ಲಿದ್ದಾಗ ಪ್ರತಿದಿವಸವೂ ರೊಟ್ಟಿಯನ್ನು ತಿನ್ನುತ್ತಿದ್ದೆ, ಆದರೆ ಈಗ 10 ದಿವಸಗಳಿಂದ ರೊಟ್ಟಿಯನ್ನು ತಿಂದಿಲ್ಲ ಆದುದರಿಂದ ಈ ದಿವಸ ರೊಟ್ಟಿಯ ಊಟವನ್ನು ಮಾಡಲು ಏರ್ಪಾಡು ಮಾಡಿ ಎಂದು ನನ್ನನ್ನು ಕೇಳಿದ್ದರು. ಇವರ ನಿಧನದ ವಾರ್ತೆ ಖಂಡಿತವಾಗಿಯೂ ಅತೀವವಾದ ದುಃಖವಾಗಿದೆ. ಇವರು ಅನೇಕ ಸಾರ್ವಜನಿಕ ಕ್ಷೇತ್ರ ಹಾಗು ವಿದ್ಯಾರಂಗದಲ್ಲಿ ಸೇವೆ ಸಲ್ಲಿಸಿದ್ದಾರೆ. ಹೈದರಾಬಾದ್ ಕರ್ನಾಟಕಕ್ಕೆ ಅನೇಕ ಉಪಕಾರಿ ಕೆಲಸಗಳನ್ನು ಮಾಡಿದ್ದಾರೆ. ಇವರೇ ಸಂಕೇಶ್ವರ ಶುಗರ್ ಫ್ಯಾಕ್ಟರಿಯ ಅಧ್ಯಕ್ಷರು ಸಹ ಆಗಿದ್ದರು. ಇವರ ನಿಧನದಿಂದ ಈ ಸದನಕ್ಕೆ ತುಂಬಲಾರದ ನಷ್ಟ ಉಂಟಾಗಿದೆ. ಇವರ ಕುಟುಂಬ ವರ್ಗದವರಿಗೆ ಈ ಅಪಾರವಾದ ದುಃಖವನ್ನು ತಡೆಯುವಂಥ ಶಕ್ತಿಯನ್ನು ಪರಮಾತ್ಮ ಕೊಡಲೆಂದು ಪ್ರಾರ್ಥಿಸುತ್ತೇನೆ.

**ಶ್ರೀ ಬಿ.ವಿ.ತುಂಗಳ್**–ಶ್ರೀಮಾನ್ ವಿಶ್ವನಾಥ ಕತ್ತಿಯವರು ನನಗೆ 7–8 ವರ್ಷಗಳಿಂದ ಪರಿಚಿತರು. ಇವರು ಬೆಳಗಾಮ್ ಕೆ.ಎಲ್.ಇ. ವಿದ್ಯಾ ಸಂಸ್ಥೆಗೆ ಚೇರ್ಮನ್‌ರಾಗಿದ್ದರು. ಇವರ ಜೊತೆಯಲ್ಲಿ ಅನೇಕ ಮೀಟಿಂಗ್‌ಗಳಲ್ಲಿ ಚರ್ಚೆ ಮಾಡಿದ್ದೇನೆ, ಇವರು ನ್ಯಾಷನಲ್ ಫೇಡರೇಷನ್‌ಮೆಂಬರ್ ಸಹ ಆಗಿದ್ದರು. ಇಂತಹ ಒಳ್ಳೆಯ ವ್ಯಕ್ತಿಯನ್ನು ಇವತ್ತು ಏಕಾಏಕಿ ಸದನದಿಂದ ನಾವು ಕಳೆದುಕೊಂಡಿದ್ದು ನಮಗೆ ತೀವ್ರವಾದ ದುಃಖವಾಗಿದೆ. ಅವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ನೀಡಲೆಂದು ಹಾಗು ಅವರ ಕುಟುಂಬ ವರ್ಗದವರಿಗೆ ಈ ಮರೆಯಲಾರದ ನೋವನ್ನು ತಡೆದುಕೊಳ್ಳುವ ಶಕ್ತಿಯನ್ನು ದಯಪಾಲಿಸಲೆಂದು ಹಾರೈಸಿ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಎಂ.ಎಲ್. ಮುತ್ತಣ್ಣನವರ್**–ಶ್ರೀ ವಿಶ್ವನಾಥ್ ಕತ್ತಿಯವರು ಬೆಳಗಾಮ್ ಜಿಲ್ಲೆಯಿಂದ ಮೊದಲನೆಯದಾಗಿ ವಿಧಾನ ಸಭೆಯ ಸದಸ್ಯರಾಗಿ ಆಯ್ಕೆಯಾಗಿದ್ದರು. ಈ ಹಿಂದೆ ಅವರು ವಿಧಾನ ಪರಿಷತ್ತಿನ ಸದಸ್ಯರಾಗಿ ಕೂಡ ಆಯ್ಕೆಯಾಗಿದ್ದರು. ನಮ್ಮ ಜಿಲ್ಲೆಯ ಸಹಕಾರ ಸಂಗದಲ್ಲಿ ಇವರು ಅನೇಕ ಉತ್ತಮ ಕೆಲಸ ಕಾರ್ಯಗಳನ್ನು

ಮಾಡಿದ್ದಾರೆ. ಸಾಕಷ್ಟು ವಿದ್ಯಾ ಸಂಸ್ಥೆಗಳ ಬೆಳವಣಿಗೆಯನ್ನು ಮಾಡಿದ್ದಾರೆ. ಶೈಕ್ಷಣಿಕ ರಂಗದಲ್ಲೂ ಕೂಡ ಇವರು ಸಾಕಷ್ಟು ದುಡಿದು ನಮ್ಮ ಬೆಳಗಾಮ್ ಜಿಲ್ಲೆಯ ಏಳಿಗೆಯನ್ನು ಮಾಡಿದ್ದಾರೆ. ಶ್ರೀಮಾನ್ ಕತ್ತಿಯವರು ನಮಗೆಲ್ಲಾ ಹಿರಿಯರಿದ್ದಂತೆ ಇದ್ದರು. ಇವರ ಮತ್ತು ನನ್ನ ನಡುವೆ ನಿಕಟ ಸಂಬಂಧವಿತ್ತು. ನನ್ನ ಜೊತೆಯಲ್ಲಿ ಅಲ್ಲದೆ ಇತರರೊಡನೆಯೂ ಸಹ ನಿಕಟ ಸಂಬಂಧವನ್ನು ಇರಿಸಿಕೊಂಡಿದ್ದರು. ಯುವಕರಿಗೆ ಹೆಚ್ಚಿನ ಪ್ರೋತ್ಸಾಹವನ್ನು ಕೊಡುತ್ತಿದ್ದರು. ನಮ್ಮ ಜಿಲ್ಲೆಯ ಏಳಿಗೆಗಾಗಿ ಸಾಕಷ್ಟು ಹೋರಾಟ ಮಾಡಿದ್ದಾರೆ. ಇವರ ನಿಧನದಿಂದ ಈ ಸದನಕ್ಕೆ ತುಂಬಲಾರದ ನಷ್ಟ ಉಂಟಾಗಿದೆ. ದಿವಂಗತರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಹಾಗೂ ಅವರ ಕುಟುಂಬವರ್ಗದವರಿಗೆ ಆಗಿರತಕ್ಕಂತ ತುಂಬಲಾರದ ನೋವನ್ನು ಪರಿಹರಿಸಲು ಭಗವಂತನು ಶಕ್ತಿಯನ್ನು ಕೊಡಲೆಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಕೆ.ಎಸ್.ಬೀಳಗಿ**–ಮಾನ್ಯ ಅಧ್ಯಕ್ಷರೇ, ಶ್ರೀ ವಿಶ್ವನಾಥ ಕತ್ತಿಯವರು ನನಗೆ 13 ವರ್ಷಗಳಿಂದ ಪರಿಚಿತರು. ಇವರು ನಮ್ಮ ಉತ್ತರ ಕರ್ನಾಟಕಕ್ಕೆ ಸಾಕಷ್ಟು ಉತ್ತಮ ಕೆಲಸವನ್ನು ಮಾಡಿದ್ದಾರೆ. ಇವರು ಪ್ರಥಮವಾಗಿ ವಿಧಾನ ಸಭೆಗೆ ಶಾಸಕರಾಗಿ ಆಯ್ಕೆಯಾದಾಗ ನಾನು ನೀನು ಇಬ್ಬರು ಒತ್ತಟ್ಟಿಗೆ ಒಂದೇ ಕಡೆಯಲ್ಲಿ ಕೆಲಸ ಮಾಡುವ ಹಾಗಾಗಿದೆ ಎಂದಿದ್ದರು. ಇವತ್ತು ಇಡೀ ಭಾರತದಲ್ಲಿ ಏಕೆ ಇಡೀ ಏಷ್ಯಾ ಖಂಡದಲ್ಲೇ ಸಂಕೇಶ್ವರ ಸಕ್ಕರೆ ಕಾರ್ಖಾನೆ ಹೆಸರು ಪಡೆದಿರುವುದು ಇವರು ಆ ಸಕ್ಕರೆ ಕಾರ್ಖಾನೆಯನ್ನು ಮುಂದುವರಿಸಿರುವುದರಿಂದಲೇ. ಬೆಳಗಾಮ್‌ನ ಕೆ.ಎಲ್.ಇ.ವಿದ್ಯಾ ಸಂಸ್ಥೆಯನ್ನು ಇವರೇ ಬೆಳೆಸಿದ್ದಾರೆ. ಇವರ ಜೊತೆಯಲ್ಲಿ ಬೆಳಗಾಮ್ ಜಿಲ್ಲೆಯ ಅನೇಕ ಶಿಕ್ಷಣ ಸಂಸ್ಥೆಗಳನ್ನು ಸಹ ಇವರು ಅಭಿವೃದ್ಧಿಪಡಿಸಿದ್ದಾರೆ. ಇಂತಹ ಸಂಸ್ಥೆಗಳಲ್ಲಿ ಏನೊಂದೂ ದುರ್ವ್ಯವಹಾರ ನಡೆಯದಂತೆ ನೋಡಿಕೊಳ್ಳುತ್ತಿದ್ದರು. ಅವರು ಬಡಬಗ್ಗರಿಗೆ ಬಹಳ ಸಹಾಯ ಮಾಡುತ್ತಿದ್ದರು. ಇವರು ಸಹಕಾರ ರಂಗದ ಧುರೀಣರೂ ಆಗಿದ್ದರು. ಇವರ ನಿಧನದಿಂದ ಸಾರ್ವಜನಕ ಕ್ಷೇತ್ರಕ್ಕೆ ತುಂಬಲಾರದ ಹಾನಿಯಾಗಿದೆ. ದಿವಂಗತರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ನೀಡಿ ಅವರ ಕುಟುಂಬದವರಿಗೆ ಆಗಿರುವ ಅಪಾರ ನೋವನ್ನು ಪರಿಹರಿಸುವ ಶಕ್ತಿಯನ್ನು ಕೊಡಲೆಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಲೀಲಾವತಿ ಆರ್. ಪ್ರಸಾದ**–ಮಾನ್ಯ ಸಭಾಧ್ಯಕ್ಷರೇ, ಮನುಷ್ಯನ ಜೀವನ ನೀರಿನ ಮೇಲಿನ ಗುಳ್ಳೆಯ ತರಹ. ಇವತ್ತಿನ ದಿವಸ ಶ್ರೀಮಾನ್ ವಿಶ್ವನಾಥ ಕತ್ತಿಯವರು ನಮ್ಮೆಲ್ಲರನ್ನು ಅಗಲಿ ಹೋಗಿದ್ದಾರೆ. ನಿನ್ನೆ ಸಂಜೆ ನಾಲ್ಕುವರೆ ಘಂಟೆಗೆ

ನನ್ನ ಹತ್ತಿರ ಬಂದು ನಾನು ಮಾನ್ಯ ಮುಖ್ಯಮಂತ್ರಿಗಳನ್ನು ನೋಡಬೇಕ್ರಿ ಎಂದು ಹೇಳಿದರು. ಆಗ ಅವರಿಗೆ ಕೈಕಾಲು ಸುಸ್ತು ಎಂದು ಹೇಳುತ್ತಿದ್ದರು. ನಾನು ಅವರಿಗೆ, ಈಗ ಹೋಗಿ ನೀವು ಮಲಗಿಕೊಳ್ಳಿ. ನಾಳೆ ಮುಖ್ಯಮಂತ್ರಿಯವರನ್ನು ನೋಡುವಿರಂತೆ ಎಂದು ಹೇಳಿ ಕಳಿಸಿದೆ, ದುರದೈವದಿಂದ ಇವತ್ತು ಸದನದಲ್ಲಿ ವಿಶ್ವನಾಥ ಕತ್ತಿಯವರು ನಮ್ಮನ್ನು ಅಗಲಿ ಹೋಗಿದ್ದಾರೆ. ನನಗೂ ಅನೇಕ ವರ್ಷಗಳಿಂದ ಅವರ ಪರಿಚಯವಿದೆ. ಅವರು ಕೆ.ಎಲ್.ಇ. ಚೇರ್ಮನ್‌ರಾಗಿದ್ದಾಗ ನನಗೆ ಏನಾದರೂ ಕೆಲಸವಾಗಬೇಕಾಗಿದ್ದಾಗೆ ಒಂದು ಕಾಗದವನ್ನು ಬರೆದು ಕಳುಹಿಸಿದರೆ ಸಾಕು ಅದಕ್ಕೆ ಅವರು ಉತ್ತರ ಕೊಟ್ಟು, ಕೆಲಸ ಮಾಡಿಕೊಡುತ್ತಿದ್ದರು. ಇವರು ನನಗೆ ಒಬ್ಬ ಹಿರಿಯ ಸಹೋದರನದ್ದಂತೆ ಇದ್ದರು. ಇವರ ನಿಧನದಿಂದ ಸದನಕ್ಕೆ ತುಂಬಲಾರದ ನಷ್ಟವುಂಟಾಗಿದೆ. ಇವರ ನಿಧನದಿಂದ ಅವರ ಕುಟುಂಬಕ್ಕೆ ಆಗಿರುವ ನೋವನ್ನು ನಿವಾರಿಸಲು ಭಗವಂತನು ಶಕ್ತಿಯನ್ನು ನೀಡಿ ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನೂ ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಚಂದ್ರಶೇಖರ್ (ಗೌರಿಬಿದನೂರು)–ಮಾನ್ಯ ಅಧ್ಯಕ್ಷರೇ, ಈಗ ತಾನೇ ನಮ್ಮನ್ನು ವಿಶ್ವನಾಥ ಕತ್ತಿಯವರು ಅಗಲಿ ಹೋಗಿದ್ದಾರೆ. ನಾನು ಅವರನ್ನು ಹೆಚ್ಚು ಭೇಟಿ ಮಾಡಿರಲಿಲ್ಲ. ಒಮ್ಮೆ ಅವರು ನನ್ನನ್ನು ಮಾತನಾಡಿಸಿದ್ದರು. ನಮ್ಮ 'ಮುಖ್ಯಮಂತ್ರಿ' ನಾಟಕವು ಬೆಳಗಾಮ್ ಜಿಲ್ಲೆಯಲ್ಲಿ ಪ್ರದರ್ಶಿತವಾದಾಗ 'ಈ ನಾಟಕವು ಬಹಳ ಚೆನ್ನಾಗಿದೆ' ಎಂದು ನನಗೆ ಬೆನ್ನು ತಟ್ಟಿ ಪ್ರೋತ್ಸಾಹವನ್ನು ಕೊಟ್ಟಿದ್ದರು. ನಾನೂ ಅನೇಕ ನಾಟಕಗಳಲ್ಲಿ ಅನೇಕ ಸಲ ಸತ್ತಿದ್ದೇನೆ. ಆದರೆ ಅದೆಲ್ಲಾ ಹುಡುಗಾಟದ ಸಾವು. ಇವತ್ತಿನ ದಿವಸ ಶ್ರೀಮಾನ್ ವಿಶ್ವನಾಥ ಕತ್ತಿಯವರು ನಿಧನ ಹೊಂದಿದ್ದಾರೆ. ಇವರ ಆತ್ಮಕ್ಕೆ ದೇವರು ಶಾಂತಿಯನ್ನು ದಯಪಾಲಿಸಿ, ಅವರ ಕುಟುಂಬ ವರ್ಗದವರಿಗೆ ಆಗಿರುವ ನೋವನ್ನು ನಿವಾರಿಸುವ ಶಕ್ತಿಯನ್ನು ಕೊಡಲೆಂದು ದೇವರನ್ನು ಪ್ರಾರ್ಥಿಸುತ್ತೇನೆ.

ಶ್ರೀ ಎಸ್.ಜಿ.ನಂಜಯ್ಯನಮಠ್–ಶ್ರೀ ವಿಶ್ವನಾಥ ಕಟ್ಟಿಯವರು ನನ್ನನ್ನು ಸ್ವಂತ ಮಗನ ರೀತಿ ಮಾತನಾಡಿಸುತ್ತಿದ್ದರು. ಅವರು ನನ್ನ ಅನೇಕ ಸಮಸ್ಯೆಗಳನ್ನು ಪರಿಹರಿಸಿದ್ದರು. ಇವರು ಕೆ.ಎಲ್.ಇ. ಸೊಸೈಟಿಯಲ್ಲಿ ಅಧ್ಯಕ್ಷರಾಗಿದ್ದರು. ಇವರ ನಿಧನದಿಂದ ಕೆ.ಎಲ್.ಇ. ಸೊಸೈಟಿಗೆ ಅಲ್ಲದೆ ವಿಧಾನ ಸಭೆ ಹಾಗು ಸಹಕಾರ ರಂಗಕ್ಕೆ ಅಪಾರ ನಷ್ಟವುಂಟಾಗಿದೆ. ಇವರ ಆತ್ಮಕ್ಕೆ ಚಿರಶಾಂತಿಯನ್ನು ಕೊಟ್ಟು ಅವರ ಕುಟುಂಬ ವರ್ಗದವರಿಗೆ ಆಗಿರುವ ನೋವನ್ನು ಭರಿಸುವ ಶಕ್ತಿಯನ್ನು

ದೇವರು ಕಡಲೆಂದು ಹಾರೈಸುತ್ತೇನೆ ಹಾಗು ತಮ್ಮ ಜೊತೆಯಲ್ಲಿ ನಾನು ಕೂಡ ದಿವಂಗತರಿಂದ ಉಂಟಾದ ನೋವಿನಲ್ಲಿ ಭಾಗಿಯಾಗಿರುತ್ತೇನೆ.

**ಶ್ರೀ ಬಸವರಾಜ್ ರಾಯರೆಡ್ಡಿ**–ಮಾನ್ಯ ಅಧ್ಯಕ್ಷರೇ, ವಿಶ್ವನಾಥ ಕತ್ತಿಯವರು ಇಂದು ನಮ್ಮನ್ನು ಅಗಲಿ ಹೋಗಿದ್ದಾರೆ. ನಾನೂ ಅವರ ಇಬ್ಬರು ಮಕ್ಕಳು ಕ್ಲಾಸ್‌ಮೇಟ್‌ಗಳಾಗಿದ್ದೆವು. ನಾವು ಓದುವಾಗ ಅವರು ಎಂ.ಎಲ್.ಸಿಯಾಗಿದ್ದರು. ಎಂ.ಎಲ್.ಸಿ. ಆಗಿದ್ದರೂ ಕೂಡ ಅವರು ನಮ್ಮ ಹಾಸ್ಟೆಲ್‌ನಲ್ಲಿ ಬಂದು ಅಲ್ಲೇ ಉಳಿದುಕೊಂಡು ನಮಗೆ ಚೆನ್ನಾಗಿ ಓದಬೇಕು ಮುಂದೆ ಬರಬೇಕೆಂದು ನಮಗೆಲ್ಲಾ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಇವರು ಎಂ.ಎಲ್.ಸಿ.ಯಾಗಿ 1972 ರಿಂದ 78 ರ ವರೆಗೆ ಸೇವೆ ಸಲ್ಲಿಸಿದ್ದಾರೆ. ಸಹಕಾರಿ ಕ್ಷೇತ್ರದಲ್ಲಿ ನಮ್ಮ ಉತ್ತರ ಕರ್ನಾಟಕಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ವಿದ್ಯಾ ಕ್ಷೇತ್ರದಲ್ಲಿಯೂ ಸಾಕಷ್ಟು ಸೇವೆಯನ್ನು ಸಲ್ಲಿಸಿದ್ದಾರೆ ಇವರು ಬಹಳ ಅನುಭವಿಕರು. ಈ ಸದನಕ್ಕೆ ಅವರ ಆವಶ್ಯಕತೆ ಇತ್ತು. ನಮ್ಮೆಲ್ಲರ ದುರ್‌ದೈವಕ್ಕೆ ಇಂದು ಅವರು ಶಿವಾಧೀನರಾದರು. ಅವರ ಕುಟುಂಬಕ್ಕೆ ಹಾಗು ದಿವಂಗತರ ಆತ್ಮಕ್ಕೆ ದೇವರು ಶಾಂತಿಯನ್ನು ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

**ಶ್ರೀ ಕೆ.ಎಸ್.ಮೊಳಕೇರಿ**–ಸನ್ಮಾನ್ಯ ಅಧ್ಯಕ್ಷರೇ, ಈಗ ತಾನೇ ಮಾನ್ಯ ಸದಸ್ಯರಾದ ವಿಶ್ವನಾಥ ಕತ್ತಿಯವರು ನಿಧನ ಹೊಂದಿದ್ದಾರೆ. ವಿಧಿ ಬರೆದ ಬರಹ ಎಂದೂ ತಪ್ಪಿಸಲಾಗುವುದಿಲ್ಲ. ಈ ಅರ್ಥವನ್ನು ನಾವು ನೆನಸಿಕೊಂಡರೆ ಜೀವನ ಎಷ್ಟು ನಶ್ವರ ಎಂಬುದು ಗೊತ್ತಾಗುತ್ತದೆ. ದಿವಂಗತರಿಗೆ ಮತ್ತು ಅವರ ಕುಟುಂಬಕ್ಕೆ ಭಗವಂತನು ಶಾಂತಿಯನ್ನು ದಯಪಾಲಿಸಿ ಅವರ ಅಗಲಿಕೆಯ ನೋವನ್ನು ಭರಿಸಲು ಶಕ್ತಿಯನ್ನು ಕೊಡಲೆಂದು ಹಾರೈಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಬಿ.ಎಲ್.ಗೌಡ**– ಶ್ರೀಮಾನ್ ವಿಶ್ವನಾಥ ಕತ್ತಿಯವರು ಈಗ ನಮ್ಮೆಲ್ಲರನ್ನು ಅಗಲಿ ಹೋಗಿದ್ದಾರೆ. ಇವರು ರಾಜ್ಯ ಸಕ್ಕರೆ ಸಹಕಾರಿ ಸಂಘಗಳ ಮಹಾಮಂಡಲದ ಅಧ್ಯಕ್ಷರಾಗಿದ್ದರು. ಅಲ್ಲದೆ ರಾಷ್ಟ್ರದ ಸಕ್ಕರೆ ಕಾರ್ಖಾನೆಗಳ ಸಂಘದ ಸದಸ್ಯರೂ ಆಗಿದ್ದರು. ಇವರು ನನ್ನ ಸ್ನೇಹಿತರೂ ಆಗಿದ್ದರು. ಮಿತಭಾಷಿಗಳಾಗಿದ್ದರು ಹಾಗೂ ಅನೇಕ ಸಂಘಸಂಸ್ಥೆಗಳಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಿದ್ದರು. ಬಡಬಗ್ಗರಿಗೆ ಇವರ ನಿಧನದಿಂದ ಬಹಳ ಲುಕ್ಸಾನಾಗಿದೆ. ಇವರ ನಿಧನದಿಂದ ಉಂಟಾಗಿರುವ ನೋವನ್ನು ನಿವಾರಿಸಲು ಅವರ ಕುಟುಂಬ ವರ್ಗದವರಿಗೆ ಶಕ್ತಿಯನ್ನು ಕೊಡಲೆಂದು ಹಾಗು ಮೃತರ ಆತ್ಮಕ್ಕೆ ಚಿರಶಾಂತಿಯನ್ನು ದಯಪಾಲಿಸಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

**ಸಭಾಧ್ಯಕ್ಷರು**–"ಈ ದಿನ ಬೆಳಿಗ್ಗೆ ಶ್ರೀಮಾನ್ ವಿಶ್ವನಾಥ ಕತ್ತಿಯವರು ನಮ್ಮ ಜೊತೆಗೆ ಈ ಸದನದಲ್ಲಿದ್ದರು. ಅದೇ ಸಮಯದಲ್ಲಿ ಅವರು ತೀವ್ರ ಅಸ್ವಸ್ಥರು ಎಂದು ಕಂಡುಬಂದಿದ್ದರಿಂದ ಅವರನ್ನು ಶೀಘ್ರವಾಗಿ ಆಸ್ಪತ್ರೆಗೆ ಒಯ್ಯಲಾಯಿತು. ಅಲ್ಲಿ ಅವರ ಪ್ರಾಣಪಕ್ಷಿ ಹಾರಿಹೋಯಿತು. ಅವರು ನಮ್ಮನ್ನು ಅಗಲಿ ಹೋಗಿದ್ದಾರೆ. ವಿಶ್ವನಾಥ ಕತ್ತಿಯವರು ಸುಮಾರು 25–30 ವರ್ಷಗಳ ಕಾಲ ಬೆಳಗಾವಿ ಜಿಲ್ಲೆಯಲ್ಲಿ ಹಾಗು ರಾಜ್ಯದ ಹಲವಾರು ಸಹಕಾರಿ ಕ್ಷೇತ್ರಗಳಲ್ಲಿ ವಿದ್ಯಾ ಕ್ಷೇತ್ರಗಳಲ್ಲಿ ಮತ್ತು ಇನ್ನಿತರ ಸಾಮಾಜಿಕ ಕ್ಷೇತ್ರಗಳಲ್ಲಿ ಅವರು ಪರಿಣಿತರಾಗಿದ್ದರು. ಅವರೊಬ್ಬ ಉಚ್ಚಮಟ್ಟದ ಸಾರ್ವಜನಿಕ ಧುರೀಣರಾಗಿದ್ದರು. ಇಂತಹ ಒಬ್ಬ ಮಹಾನ್ ವ್ಯಕ್ತಿ ಇವೊತ್ತಿನ ದಿವಸ ನಮ್ಮನ್ನು ಅಗಲಿ ಹೋಗಿದ್ದಾರೆ. ಈ ದಿನ ಸದನದಲ್ಲಿ ನಮ್ಮೆಲ್ಲರ ಮಧ್ಯೆ ಇದ್ದು, ಕೆಲವೇ ಘಂಟೆಗಳಲ್ಲಿ ನಮ್ಮನ್ನು ಅಗಲಿದುದು ವಿಧಿಯ ಕೈವಾಡ ಎನಸುತ್ತದೆ. ಅವರ ನಿಧನದಿಂದ ಅವರ ಕುಟುಂಬದವರಿಗೆ ಆದ ದುಃಖದಲ್ಲಿ ನಾವು ಭಾಗಿಗಳಾಗಿದ್ದು ದಿವಂಗತರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ಅನುಗ್ರಹಿಸಲು ಎಂದು ನಾನು ಪ್ರಾರ್ಥಿಸುತ್ತೇನೆ. ಅವರ ನಿಧನದ ಬಗ್ಗೆ ಸಂತಾಪ ಸೂಚಿಸಲು ಸಭೆಯು ಒಂದು ನಿಮಿಷ ಕಾಲ ಎದ್ದು ನಿಂತು ಮೌನ ಆಚರಿಸಬೇಕೆಂದು ಕೋರುತ್ತೇನೆ."

* * * * *

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕಪಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕಪಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15–00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎಸ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ಸಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ<br>ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | | |
|---|---|---|---|
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ಧೇ.ಮಾ. ಪಾಟೀಲ | 20–00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. | ಮೊಹಮ್ಮದ್ ಅಲಿ | ಪ್ರೊ॥ ಶಿವರಾಜ ಪಾಟೀಲ | 20–00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20–00 |
| 62. | ಸದಾಶಿವ.ಎಸ್.ಶೆಟ್ಟರ್ | ನಾರಾಯಣ ಘಳಗಿ | 20–00 |
| 63. | ಅಂದಾನಪ್ಪ ದೊಡ್ಡಮೇಟಿ | ಪ್ರೊ. ಸಿ.ವಿ. ಕೆರಿಮನಿ | 25–00 |
| 64. | ಎಸ್.ವ್ಯೆ. ಪಾಟೀಲ | ಡಾ. ಎಂ.ಎಸ್. ಪಾಟೀಲ್ | 20–00 |
| 65. | ವ್ಯೆ. ರಾಮಚಂದ್ರ | ಪ್ರೊ. ಚಿಕ್ಕಣ್ಣ | 20–00 |
| 66. | ಕೆ.ಪಿ. ರೇವಣ್ಣಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 67. | ವ್ಯೆ.ಕೆ. ರಾಮಯ್ಯ | ಡಾ. ಹಿ.ಚಿ. ಬೋರಲಿಂಗಯ್ಯ | 20–00 |
| 68. | ಸೋಲೂರು ಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 69. | ಎಂ.ವ್ಯೆ. ಘೋರ್ಪಡೆ | ಮಹಾಬಲೇಶ್ವರ ಕಾತ್ರಹಳ್ಳಿ | 20–00 |
| 70. | ಎಂ.ಪಿ. ಪಾಟೀಲ್ | ಡಾ. ಗುರುಪಾದ ಮರಿಗುದ್ದಿ | 20–00 |
| 71. | ಎಚ್.ವಿ. ಕೌಜಲಗಿ | ಡಾ. ಡಿ.ಎಸ್. ಜಯಪ್ಪಗೌಡ | 20–00 |
| 72. | ಡಾ॥ ಎಂ.ಆರ್. ತಂಗಾ | ಎಸ್. ಸುರೇಶ್ ಕುಮಾರ್ | 25–00 |
| 73. | ಕೆ.ಎನ್. ನಾಗೇಗೌಡ | ಪ್ರೊ. ಹೆಚ್.ಎಸ್. ಮುದ್ದೇಗೌಡ | 20–00 |
| 74. | ಎ.ಆರ್. ಪಂಚಗಾವಿ | ಪ್ರೊ. ಚಂದ್ರಶೇಖರ ಅಕ್ಕಿ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20-00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15-00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20-00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20-00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15-00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20-00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20-00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15-00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20-00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20-00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15-00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15-00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15-00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15-00 |

ಸರ್ಕಾರಿ ಮುದ್ರಣಾಲಯ, ಕೆಂಗೇರಿ, ಬೆಂಗಳೂರು-59.

